Koravanji

# ಕೊರವಂಜಿ

ಮೇ ೧೯೪೯



ಸಂಪಾದಕರು :

ಶ್ರೀ|| ರಾ. ಶಿ.

ಬರಹಗಾರರು :

ಶ್ರೀ|| ಶಿವಣ್ಣ
ಶ್ರೀ|| ಕೈಲಾಷ
ಶ್ರೀ|| ದಾಶರಥಿ ದೀಕ್ಷಿತ್
ಶ್ರೀ|| ನಾ. ಕಸ್ತೂರಿ
ಶ್ರೀ|| ಗಂಗಾಧರ
ಶ್ರೀ|| ರೇವಣ್ಣ
ಶ್ರೀ|| ಪಾಟೀಲ
ಶ್ರೀ|| ರಾಜರತ್ನಂ
ಶ್ರೀ|| ಜಿ.ಪಿ.ಸು

ಇತ್ಯಾದಿ, ಇತ್ಯಾದಿ.

## ತಿಳಿನಗೆಯ ಮಾಸಪತ್ರಿಕೆ

[illegible] — ಕೇವಲ [illegible]

ಬೆಂಗಳೂರು ಸಾಗರ್ ಟಾಕೀಸ್‌ನಲ್ಲಿ

29-4-49ರಿಂದ 10ನೇ ವಾರ



ಶೋಭನಾಚಲರವರ

# ಕೀಲು—
# —ಗುರ್ರಂ

(ತೆಲುಗು)

ಪ್ರಧಾನ ಭೂಮಿಕೆಯಲ್ಲಿ—ಅಂಜಲಿದೇವಿ
ನಾಗೇಶ್ವರ ರಾವ್

29—4—49ರಿಂದ 6 ನೇ ವಾರ
ಚಿಕ್ಕಬಳ್ಳಾಪುರ ಬಾಲಾಜಿ ಟಾಕೀಸ್

27—4—49ರಿಂದ 5 ನೇ ವಾರ
ದಾವಣಗೆರೆ ವಸಂತಾ ಟಾಕೀಸ್

27—4—49ರಿಂದ 4 ನೇ ವಾರ.
ಕೆ. ಜಿ. ಎಫ್ ಮಾಡರ್ನ್ ಟಾಕೀಸ್

—A TALLAM RELEASE.

# RAJA

(TRADE MARK)

*Famous* *Favourites.*










ಸ್ನೋ,: ಬ್ರಿಲಿಯನ್‌ಟೈನ್,
ಫೇಸ್ ಪೌಡರ್

FAS
435

## MANYAM & CO.,

Bangalore, Madras, Madura, Bombay.

---

**ಎಸ್. ಎ. ತಿಪ್ಪಯ್ಯ ಸೆಟ್ಟಿ ಅಂಡ್ ಬ್ರದರ್ಸ್,**

**ಅವೆನ್ಯೂ ರೋಡ್ :: ಬೆಂಗಳೂರು ಸಿಟಿ.**

— ಮತ್ತು —

**ಚಂದ್ರಾ ಸ್ಟೋರ್ಸ್,**

**ಅವೆನ್ಯೂ ರೋಡ್ :: ಬೆಂಗಳೂರು ಸಿಟಿ.**

**ಇವರುಗಳಲ್ಲಿ ಸಿಕ್ಕುತ್ತವೆ.**

---

## ...ರನ್ನೂ, ಗಂಜಿಯನ್ನೂ ಈ ರೀತಿ ಮಾಡುವುದು ಸುಲಭ




**ಬಾರ್ಲೀ ನೀರು:** ತಲೆ ಸವರಿ 2 ಚಮಚಾಗಳಷ್ಟು ಪ್ಯೂರಿಟೀ ಬಾರ್ಲಿಗೆ ನೀರು ಸೇರಿಸಿ ಅಂಟಾಗಿ ಕಲಸಿ, ಒಂದು ಪೈಂಟು ನೀರು ಬೆರಸಿ, 5 ನಿಮಿಷಗಳ ವರೆಗೆ ಮಾತ್ರ ಕುದಿಸಿರಿ. ಉಪ್ಪು, ಸಕ್ಕರೆ ಅಥವಾ ನಿಂಬೆಯ ರಸವನ್ನು ನಿಮ್ಮ ನಿಮ್ಮ ರುಚಿಗೆ ತಕ್ಕಂತೆ ಸೇರಿಸಿಕೊಳ್ಳಿರಿ.

**ಗಂಜಿ:** ಇವನ್ನು ಸಾಧಾರಣ ರೀತಿಯಲ್ಲೇ ಮಾಡಿರಿ. ಆದರೆ ಇವನ್ನು ಮಾಡಲು ಇಪ್ಪತ್ತೇ ನಿಮಿಷಗಳು ಬೇಕಾಗುವುವು.

ಒಂದು ಔಂಸದಷ್ಟು ಪ್ಯೂರಿಟೀ ಬಾರ್ಲೀಗೆ ಎಂಟು ಔಂಸುಗಳಷ್ಟು ಸಾಧಾರಣ ನೀರು ಬಾರ್ಲೀ ತಯಾರಾಗುವುದು.




ಅಟ್ಲಾಂಟಿಸ್ (ಈಸ್ಟ್) ಲಿಮಿಟೆಡ್, ಪೋ. ಬಾ. ನಂ. 864 ಕಲಕತ್ತಾ

APBX-4 KN

---



|| ಶುಭಮಸ್ತು ||

ಸಮಸ್ತ ಸನ್ಮಂಗಳಾನಿ ಭವಂತು

# ಮದುವೆ ಜವಳಿಗೆ

ಹೆಸರುವಾಸಿಯಾದ ಅಂಗಡಿ

## ಬಾಹುಸಾರ್ ಕಂಪೆನಿ, ಮೈಸೂರು.

★

## ರೇಷ್ಮೆ ಸೀರೆಗಳು



ನೀವು ಅನೇಕ ಬೆಂಗಾಲ್, ಬನಾರಿಸ್, ಮೈಸೂರು ಸಿಲ್ಕ್ ಸೀರೆಗಳನ್ನು ನೋಡಿದ್ದೀರಿ. ಬಾಹುಸಾರ್ ಕಂಪೆನಿಯಲ್ಲಿರುವುದನ್ನೂ ನೋಡಿ. ಎಂತೆಂತಹಾ ಒಳ್ಳೊಳ್ಳೇ ನಮೂನೆಗಳಿವೆ ಎಂಬುದು ನಿಮ್ಮ ಮನಸ್ಸಿಗೇನೇ ಖಾತ್ರಿಯಾಗುತ್ತದೆ. ರೇಷ್ಮೆ ಸೀರೆಗಳಿಗೆ ಹೆಸರುವಾಸಿಯಾದ ಅಂಗಡಿ ಎಂದರೆ

**ಬಾಹುಸಾರ್ ಕಂಪೆನಿ,**

ಓಲ್ಡ್ ಮೈಸೂರು ಬ್ಯಾಂಕ್ ರೋಡ್, ಮೈಸೂರು.

## ಈಗ ಯಶಸ್ವಿಯಾಗಿ ಪ್ರದರ್ಶಿಸಲ್ಪಡುತ್ತಿದೆ

ಬೆಂಗಳೂರು ಸಿಟಿ : ಶಿವಾಜಿ
ಬೆಂಗಳೂರು ದಂಡು : ರೂಪಮಹಲ್
ಮಂಗಳೂರು ಸೆಂಟ್ರಲ್
ಮೈಸೂರು ಚಾಮುಂಡೇಶ್ವರಿ ಮತ್ತು ಗಣೇಶ

ಪಕ್ಷಿರಾಜರವರ ಅಮೋಘ ಕಲಾಕೃತಿ

# ಪವಳಕೊಡಿ

(ತಮಿಳು)



ಭೂಮಿಕೆಯಲ್ಲಿ :

ಟಿ. ಆರ್. ಮಹಾಲಿಂಗಂ
ಟಿ. ಆರ್. ರಾಜಕುಮಾರಿ
ಟಿ. ಇ. ವರದನ್
ಎಂ. ಎಸ್. ಸರೋಜಿನಿ
ಎನ್. ಎಸ್. ಕೃಷ್ಣ
ಟಿ. ಎ. ಮಧುರಂ
ಲಲಿತ, ಮತ್ತು ಪದ್ಮಿನಿ
ಮುಂತಾದವರು

ಡೈರೆಕ್ಷನ್ :

ಎಸ್. ಎಂ. ಶ್ರೀರಾಮುಲು ನಾಯ್ಡು.



**NARAYANAN COMPANY RELEASE.**

# ಕೊರವಂಜಿ





ಸಂಪುಟ ೮ | ಮೇ ೧೯೪೯ | ಸಂಚಿಕೆ ೨


★★

## ಕುಹಕಿಡಿಗಳು

★★

ಶ್ರೀಯುತ ಅಟ್ಲಿ ಅವರು ಈಗ ಸಂಸ್ಕೃತ ಕಲಿತಿದ್ದಾರಂತೆ.

—ಮಲನಾಯು ಸ್ವಸ್ತಿ, ನೆಹ್ರೂ ಸ್ವಸ್ತಿ, ಲಿಯಾಖತ್ ಅಲಿ ಖಾನಾಯು ಸ್ವಸ್ತಿ ಎಂದು ಆಶೀರ್ವದಿಸಿದರಂತೆ.

* * *

ನಮ್ಮೂರಿನಲ್ಲಿ ಸರ್ಕಾರಿ ಆಸ್ಪತ್ರೆಗಳ ದರ್ಜೆಗೆ ಖಾಸಗಿ ನರ್ಸಿಂಗ್ ಹೋಂಗಳೂ ಇಳಿಯಬೇಕು ಎನ್ನುವುದುಕ್ಕೋಸ್ಕರ ಕಾನೂನುಗಳನ್ನು ತರುತ್ತಾರೆ ಎನ್ನುವುದು ಶುದ್ಧ-ಕುಹಕ—

* * *

ಮದ್ರಾಸಿನಲ್ಲಿ ಮಂತ್ರಿಗಳಿಗೊಬ್ಬೊಬ್ಬರಿಗೂ ಒಂದೊಂದು ಹೊಸ ಮೋಟಾರು ಡ್ರೈವರು, ಸೇವೆಗೆ ಸಿಗುತ್ತಾರಂತೆ—

—ಆದರೆ ಅವರ ತಾತ್ಕಾಲಿಕ ಸುಖಕ್ಕಾಗಿ ನಾವು- ಅಸೂಯೆಗೊಳ್ಳುವುದಿಲ್ಲ.

* * *

ಲೋಕ ಕೆಟ್ಟು ಹೋಯಿತು. ಅನ್ನೋದು ಖಂಡಿತ—

—ಮೊನ್ನೆ ರೇಷನ್ ಆಫೀಸಿನ ನೌಕರ ಒಬ್ಬ ಕಛೇರಿಗೆ ಬಂದ, ಕಕ್ಷಿಗಾರನಿಗೆ ಕಾಫಿ ಕೊಡಿಸಿದ.

* * *

ಒಬ್ಬ ಕಳ್ಳ ತಾಳೀಪೇಟೆಯುಲ್ಲಿ ಹತ್ತು ಮನೆಗೆ ಒಂದೇ ರಾತ್ರಿ ಕನ್ನ ಹಾಕಿದನಂತೆ.

—ಇವರಿಗೇನು ರೇಷನ್ ಏರ್ಪಾಡು ಇಲ್ಲವೋ ?- ಒಬ್ಬೊಬ್ಬ ಕಳ್ಳನಿಗೆ ಇಷ್ಟಿಷ್ಟು ಮನೆ ಅಂತ.

* * *

ಮೊನ್ನೆ ಆಸ್ಪತ್ರೇಲಿ ರಾಜ ಎಂಬ ಹುಡುಗ ತುಂಬಾ ಅಳುತ್ತಿದ್ದನಂತೆ. ಡಾಕ್ಟರು ಏನು ಮಾಡಿದರೂ ಸುಮ್ಮನಾಗಲಿಲ್ಲವಂತೆ.

—ಆಗ ದಾದಿಯೊಬ್ಬಳು ಒಂದು ವಿ. ಪಿ ಮೆನೆನ್‌ಗೆ ಹೇಳಿ ಕಳಿಸುತ್ತೇನೆ ಎಂದಾಗ ರಾಜ ಸುಮ್ಮನಾದನಂತೆ.

* * *

ಒಬ್ಬ ರಸಿಕ ಹೆಂಡತಿಯ ಹಾರ್ಮೋನಿಯಂ ಅನ್ನು ತೊಟ್ಟಿಲಲ್ಲಿಟ್ಟು ತೂಗುತ್ತಿದ್ದನಂತೆ- ಜೋಗುಳ ಹಾಡುತ್ತ—

— ಕಾರಣ ಅದು ಕೆಟ್ಟ ಕೆಟ್ಟದಾಗಿ ಅಳದೇ ಇರಲಿ ಅಂತ.

* * *

ದೇಶದ ಉದ್ಧಾರಕ್ಕಾಗಿ ನಾನೇನು ಬೇಕಾದರೂ ತ್ಯಾಗಮಾಡಲು ಸಿದ್ಧ.

(ಭಾಷಣಕಾರ)

—ಭಾಷಣಗಳನ್ನು ತ್ಯಾಗ ಮಾಡಿದರೆ ಸಾಲದೆ !

* * *

ಹೆಬ್ಬಿ ಗುಬ್ಬಾಲೆಯುವರು ಪಗಡೆ ಆಟದಲ್ಲಿ ಪ್ರವೀಣರಂತೆ-

—ದಾಳ ಉರುಳಿಸಿದರೆ ಸವೆದು ಹೋಗುತ್ತೆ ಎಂಬ ಜಿಪುಣತನವೇ ಅವರಿಗೆ ಈ ಪ್ರವೀಣತೆಯನ್ನು ದೊರಕಿಸಿರಬಹುದೇ ?

* * *

ಸ್ಟಾಲಿನ್ನವರೂ ಕೂಡ ಈಗ ಒಂದು 'ಕಾಮನ್ ವೆಲ್ತ್' ಪ್ರಧಾನಿಗಳ ಸಮ್ಮೇಳನವನ್ನು ಕರೆಯಲಿದ್ದಾರಂತೆ.

— ಶ್ರೀ ಅಟ್ಲಿ- ನೆಹ್ರೂ ಅವರಿಗೂ ಆಹ್ವಾನವಿತ್ತಿದ್ದಾರಂತೆ.

* * *

ಬಂಗಾಳದಿಂದ ಮುನ್ನೂರು ಕೋತಿಗಳನ್ನು ವಿಲಾಯಿತಿಗೆ ಕಳಿಸಿದರಂತೆ.

—ಅಂದಮೇಲೆ ಹೊಸಾ ಹೊಸ ಚುನಾವಣೆಗಳುಂಟೇ ?

* * *

ಇಂಡೋನೀಷ್ಯಾ ಮಾಜಿ ಗವರ್ನರು ರಾಣಿ ಜೂಲಿಯಾನಾಗೆ ಕಾಗದ ಬರೆದಿದ್ದಾರಂತೆ—

"ಎಲ್ಲಾ ಸಮರ್ಪಕವಾಗಿ ತೀರ್ಮಾನ ಮಾಡದಿದ್ದರೆ ನಾನು ಉಪವಾಸ ಮಾಡುತ್ತೇನೆ" ಎಂದು —ಇಂಡೋನೀಷ್ಯಾದಲ್ಲಿ 'ಸರ್ವೋದಯ ಸಂಘ' ದ ಆರಂಭದ ಸೂಚನೆಯೇ ?

* * *

# ಉರಿಗಾಳು

ಮಿಡ್ಲ್ ಹಾಗೂ ಹೈಸ್ಕೂಲುಗಳಲ್ಲೇ ವಿದ್ಯಾರ್ಥಿಗಳಿಗೆ ಚಲನ ಚಿತ್ರಗಳನ್ನು ತೋರಿಸುವ ಏರ್ಪಾಟನ್ನು ಇಲಾಖೆಯವರು ಜಾರಿಗೆ ತರಲಿದಾರೆ.................. ರಸಭರಿತವಾದ ಇವರೇ ಚಿತ್ರಗಳಿಗೆ ಅವರು ನುಗ್ಗುವಂತೆ ಮಾಡಲು ಇದೂ ಒಂದು ಉಪಾಯ

* * *

"ಇದು ಮಕ್ಕಳ ಯುಗ! ಮಕ್ಕಳಿಗೆ ಮನ್ನಣೆ ಕೊಡುವ ಯುಗ!" (ಭಾಷಣ) ................ಯಾವ ಕ್ಷೇತ್ರವನ್ನು ನೋಡಿದರೂ, ನಮಗೆ ಇದು ಸರಿ ಎನಿಸುತ್ತದೆ.

* * *

"ಕರ್ಮಶೇಷ ತೀರುವವರೆಗೂ ಮನುಷ್ಯ ಇಹಲೋಕದಲ್ಲಿ ಬದುಕಲೇ ಬೇಕಾಗುತ್ತದೆ" (ಲೇಖನ)........ಇದಕ್ಕೆ ನಮ್ಮ ಉಪಾಧ್ಯಾಯರುಗಳೇ ನಿದರ್ಶನ.

* * *

"ಮದ್ರಾಸ್ ಮಂತ್ರಿಮಂಡಳದ ರಚನೆ ಕಾಲದಲ್ಲಿ ತುಂಬಾ ಹಂಚಿಕೆ ನಡೆಯಿತು" (ಪತ್ರಿಕೆ)

* * *

ಪಂಡಿತ ನೆಹರುರವರು ಅರಬೀ ಸಮುದ್ರದಲ್ಲಿ ಮಿಂದ ವಾರ್ತೆಯನ್ನು ಕೇಳಿದಾಗ, ಲಿಯಾಖತ್ ಆಲಿಖಾನ್‌ರು ಅರಬೀ ರಾಜಕೀಯ ಸಮುದ್ರದಲ್ಲಿ ಮುಳುಗಲು ನಿಶ್ಚಯಿಸಿದರು.

* * *

"ಹಗಲು ಹೊತ್ತಿನಲ್ಲೆ ಕದ್ದ ಬಾಲಕನ ಬಂಧನ" (ಶಿರೋನಾಮೆ) ಪರವಾಗಿಲ್ಲ! ಪೋಲೀಸಿನವರು ಧೈರ್ಯವಂತರು.

* * *

" ಇದುವರೆಗೂ ದುಡ್ಡಿದ್ದವನು ದೊಡ್ಡವನು ಎಂಬುದಿತ್ತು"(ಭಾಷಣ)....... ಈಗ ದುಡ್ಡಿದ್ದವನು ಬದುಕುವನು. ಎಂಬುದಾಗಿದೆ

* * *

" ನಾವೆಲ್ಲ ಪಾಶ್ಚಾತ್ಯರಂತೆ, ಸೋಮಾರಿತನವನ್ನು ತೊರೆದು, ಹಗಲಿರುಳೂ ದುಡಿಯಬೇಕು " (ಭಾಷಣ)........... ಹಾಗೆ ದುಡಿಯುವುದೇಕೆ ? ಕಡೆಗೆ ಛೀ ಮಾರಿ ಮಾಡಿಸಿಕೊಂಡು ಗಂಟು ಮೂಟೆ ಕಟ್ಟುವುದೇಕೆ ?

* * *

ಮುಖ್ಯವಾಗಿ, ಸಂಗೀತದಂತೆ, ಭಾಷಣ ಮಾಡುವುದೂ ಒಂದು ಉತ್ತಮವೂ ಉಪಯುಕ್ತವೂ ಆದ ಕಲೆ (ಮಂತ್ರಿಗಳ ಭಾಷಣ)........... ಜನ ಸಂದಣಿಯನ್ನು ಕರಗಿಸಲು ಎರಡೂ ತುಂಬಾ ಉಪಯುಕ್ತ.

* * *

ಉತ್ತಮ ಭಾಷಣ ಮಾಡುವ ಯೋಗ್ಯತೆಮಾತ್ರ ಇದ್ದರೆ ಸಾಲದು (ಅದೇ ಭಾಷಣ)......ಕೇಳುವ ಪಶುಗಳೂ ಬಂದು ನೆರೆಯಬೇಕು.

* * *

ಸೆಕ್ರಿಟೇರಿಯಟ್ ಮೈದಾನದಲ್ಲಿ ಹತ್ತು ಸಹಸ್ರ ರೈತರ ಪ್ರದರ್ಶನ

(ಲಕ್ನೊ ಸುದ್ದಿ)

... ............ಬಹುಮಾನ ವಿನಿಯೋಗಕ್ಕೆ ಯಾವಯಾವ ಷರತ್ತುಗಳನ್ನು ನುಸರಿಸಿದರೊ, ತಿಳಿಯಲು ಕುತೂಹಲರಾಗಿದೇವೆ.

* * *

ಕೇಂದ್ರ ಸರ್ಕಾರದ ಕಾನೂನಿನಂತೆ, ೨೦ ವರ್ಷ ವಯಸ್ಸಿನ ಗಂಡನು ೧೫ ವರ್ಷ ವಯಸ್ಸಿನ ಹೆಂಡತಿಯನ್ನು "ಯು" ತರಗತಿ ಸಿನಿಮಕ್ಕೆ ಕರೆದೊಯ್ದರೆ, ಅವಳನ್ನು ಸಿನಿಮದವರು ತಡೆಯಬೇಕೆಂದಿದೆ........ ಇಂಥ ಕಷ್ಟಕ್ಕೆ ಪರಿಹಾರವೇನೆಂದು ಕೇಳಲಾಗಿ, ಸಿನಿಮ ನೋಡುವ ಪ್ರಯುಕ್ತ ಹದಿನೆಂಟು ವರ್ಷದವಳನ್ನು ಮದುವೆ ಮಾಡಿಕೊಳ್ಳಲಿ ' ಎಂಬ ಉತ್ತರ ಬಂದಿರಬಹುದು.

* * *

# ಯುದ್ಧವೇ ?

" ಇಡೀ ಲೋಕದಲ್ಲಿ ಏನೇ ಆಗಲೀ, ಹೋಗಲೀ ರಷ್ಯಾ ಅಮೇರಿಕಾ ಗುದ್ದಾಡಲೀ ಬಿಡಲೀ, ಚೀನಾದಲ್ಲಿ ಸೋದರ ಸಮರ ಆಗಲೀ ಹೋಗಲೀ, ಶ್ವೇತ ಕಾಳ ವರ್ಣೀಯರು ಹೊಡೆಯಲಿ ಬಡಿಯಲೀ, ಏನೇ ಆಗಲಿ, ಹೆಬ್ಬಾಲೆಯಲ್ಲಿ ಯುದ್ಧ ತಪ್ಪುವಂತೆ ಕಾಣಿಸುವುದಿಲ್ಲ.

ಹೋಟಲು ಕೆಲಸಗಾರರೆಲ್ಲಾ 'ಸಂಘೇಶಕ್ತಿ ಕಲೌಯುಗೇ' ಎಂದು ಸಭೆ ಗೂಡಿ ಈ ಠರಾವುಗಳನ್ನು ಮಾಡಿದ್ದಾರೆ.

(ಅ) ನಮ್ಮ ಹೋಟಲುಗಳಲ್ಲಿ ನಾವು ತಿನ್ನಲೇಬೇಕು ಎಂದು ನಿಯಮವಿರುವುದು ವ್ಯಕ್ತಿಸ್ವಾತಂತ್ರ್ಯಕ್ಕೆ ಅಪಚಾರ. ಅದರ ಬದಲು ಮಾಲೀಕರು "ತಿಂಡಿಭತ್ಯ" ಕೊಟ್ಟು ನಾವೆಲ್ಲಿ ಬೇಕಾದರೂ ತಿನ್ನಲು ಅವಕಾಶ ಕೊಡಬೇಕು.

(ಆ) ಆರೋಗ್ಯ ಅಧಿಕಾರಿಗಳ ಸೂಚನೆಯಂತೆ ನಮಗೆ ಮೇಲಂಗಿ ಕೊಟ್ಟಿದ್ದಾರಲ್ಲ ! ಅದರಲ್ಲೇ ತಟ್ಟೆ ಬಟ್ಟಲುಗಳನ್ನು ಒರಿಸಿ ಎಂದು ಹೇಳುವುದನ್ನು ನಿಲ್ಲಿಸಬೇಕು.

(ಇ) ನಮ್ಮ ಪರಿಚಿತರು ದೋಸ್ತುಗಳೂ ಬಂದಾಗ ಅವರಿಗೆ ರಿಯಾಯಿತಿ ದರದಮೇಲೆ 'ಟಿಫಿನ್' ಕೊಡಬೇಕು. ಇದರಿಂದ ನಾವು ಪ್ರಾಮಾಣಿಕರಾಗಲು ಸಹಾಯವಾಗುತ್ತೆ.

(ಈ) ಮಾಲೀಕರಿಗೆ ನಾವು 'ಕಾಫೀ ಬಾರ್' ನಿಂದ ಕಾಫೀ ತಂದು ಕೊಡುವುದು ನಿಲ್ಲಬೇಕು.

ಕಕ್ಷಿಗಾರರಿಗೆ ನಾವು ಆಡಿಯಾಳೇ ವಿನಹಾ, ಹೋಟೆಲ್ ಮಾಲೀಕರ ಆಡಿಯಾಳುಗಳಲ್ಲ.

(ಉ) ವಾರಕ್ಕೆ ಎರಡು ದಿನ ರಜಾ ಕೊಡಬೇಕು. ಹಾಗೂ ಸಂಬಳದ ಜೊತೆಗೆ ನಮಗೆ ರಜಾದಿನ ಸಿನೀಮಾಕ್ಕೆ ಹೋಗಲು 'ಸಿನೀಮಾ ಭತ್ಯ' ಕೊಡಬೇಕು.

(ಊ) ನಮ್ಮಿಂದ ಹೋಟಲಿಗೆ ಬಂದ ನಿವ್ವಳ ಲಾಭದಲ್ಲಿ ನಮಗೆ ಶೇಕಡಾ ೫ ರಷ್ಟು ಕೊಡಬೇಕು.

ಈ ಲೆಕ್ಕವನ್ನು ನಾವೇ ಇರಿಸುತ್ತೇವೆ.

ಇತ್ಯಾದಿ

* * *

ಹೋಟಲು ಮಾಲೀಕರೆಲ್ಲಾ ಸಭೆಗೂಡಿದರು—ಅದೇ ಕಲಿಗಾಲ ಅದೇ ಸಂಘಶಕ್ತಿ.

ಅವರುಗಳು ಈ ಠರಾವುಗಳನ್ನು ಅವತ್ತೇ 'ಪ್ಯಾಸು' ಮಾಡಿದರು.

(ಅ) ನಮ್ಮ ಕೆಲಸಗಾರರು ಮಾಡಿದ ತಿಂಡಿ ಪದಾರ್ಥಗಳನ್ನು ಅವರು ತಿನ್ನಲೇಬೇಕು. ಅದಕ್ಕೆ ಬೇಕಾದರೆ 'ಭತ್ಯ' ಕೊಡುತ್ತೇವೆ.

(ಆ) ಆರೋಗ್ಯ ಅಧಿಕಾರಿಗಳು ಕೊಟ್ಟ "ಮೇಲಂಗಿ"ಯಲ್ಲಿ ತಟ್ಟೆ ಬಟ್ಟಲುಗಳು ಹಾಗಿರಲಿ ಇವರು ಮುಖ ಮೂಗು ಕೈಗಳನ್ನು ಒರಸಿಕೊಳ್ಳಕೂಡದು. ಹಾಗೆ ಉಪಯೋಗಿಸಿದರೆ ಅಗಸನ ಖರ್ಚಿಗೆ ಎಂದು ಒಂದಾಣೆ ದಿನಾಲೂ ಕೊಡಬೇಕು.

(ಇ) ನಮ್ಮ ಪರಿಚಿತರು ದೋಸ್ತುಗಳು ಮನೆಯವರೂ ಹೋಟಲಿಗೆ ಬಂದಾಗ—ಉಪಾಯದಿಂದ ಅವರಿಂದ ಹಣ ಪಡೆದೇ ತಿಂಡಿ ಸರಬರಾಜು ಮಾಡಬೇಕು. ಸಾಲ ಖಂಡಿತ ಕೂಡದು.

(ಈ) 'ಕಾಫೀ ಬಾರ್' ನಂತೆಯೇ ನಮ್ಮ ಹೋಟಲುಗಳಲ್ಲಿಯೂ ಒಳ್ಳೆ ಕಾಫಿ ಮಾಡುವತನಕ, ನಮ್ಮ ಸರಪರಾಜು ಕೆಲಸಗಾರರಿಂದ ಆಗಲೇಬೇಕು.

(ಉ) ವಾರಕ್ಕೆ ಎರಡುದಿನ ಕೆಲಸಗಾರರಿಗೆ ಸಿನಿಮಾ ಭತ್ಯ ಹಾಗೂ ರಜೆ ಕೊಡಲು ಸಿದ್ಧ. ಆದರೆ ಮಿಕ್ಕ ಐದು ದಿನಗಳೂ ಕಾಯಾ ವಾಚಾ ಮನಸಾ ಕೆಲಸ ಮಾಡಬೇಕು. ಬಂದ ಅತಿಥಿಗಳಿಗೆ ನಿನ್ನಿನ ಮೈಸೂರುಪಾಕ್, ಮೊನ್ನಿನ ಓಂಪುಡಿ ಎಂದು ಹೇಳಬಾರದು.

(ಊ) ನಿಮ್ಮಳ ಲಾಭದಲ್ಲಿ ಆಯಾ ಅದ್ಮಿಗೆ ಶೇಕಡಾ ೫ ರಷ್ಟು ಲಾಭ ಕೊಡಲು ಕಬೂಲ್ ಇದ್ದೇವೆ. ಆದರೆ ನಷ್ಟಆದಾಗ ಅವರೂ ಶೇಕಡಾ ೫ ರಷ್ಟು ಕೊಡಬೇಕು.

ನಾವೇ ಲೆಕ್ಕ ಇಡುತ್ತೇವೆ—ಈ ಹಕ್ಕನ್ನು ನಾವು ಬಿಡಲಾರೆವು. ನಮಗೆ ಬೇರೆ ಕೆಲಸ ಏನಿದೆ?

* * *

ಈ ಠರಾವುಗಳು ಒಂದಕ್ಕೊಂದು ಸ್ವಲ್ಪ ವ್ಯತಿರಿಕ್ತ ಅಲ್ಲವೇ ?

ಎಂದೋ ಏನೋ ಯುದ್ಧ ಖಂಡಿತ.

—ಶಿವಣ್ಣ.

# ಶಾಮಣ್ಣನ ಅಂಗಿ

—o—

ನಂ ಶಾಮಣ್ಣನಂಗಿ ಮೊಳಕೈ ಹತ್ರ ತುತ್ತೂತಾಗಿತ್ತು.
ನೋಡ್ದೋರೆಲ್ಲ ಗೊಳ್‌ಗೊಳ್ಳಂತ ನಗೊ ಹಾಗಾಗಿತ್ತು.

“ನಿಲ್ಲಿಸ್ದಿದ್ರೀ ನಗುವನ್—ನಾನ್ಯಾರ್ ಶಾಮಣ್ಣಲ್ವೇನ್ರೋ !
ಸೂಜಿ ದಾರ ತರ್ತೀನ್ ತಾಳಿ ! ಆಮೇಲ್ ನೋಡ್‌ಬನ್ರೋ ! ”

ಅಂತಂದೋನೆ ನಂ ಶಾಮಣ್ಣ—

ತೋಳ್ನಲ್ ಒಂದಿಷ್ಟ್ ಕತ್ತರ್‌ಸಿದ್ದೇ ತೇಪೆಹಾಕ್ದ ಮೊಳಕೈಗೆ !
ಅಂಗಿ ತೊಟ್ಕೊಂಡ್ರೇನಾಭಾಸ—ತೋಳೇಸಾಲ್ದು ಮುಂಗೈಗೆ !

ನೋಡ್ದೋರೆಲ್ಲ ಹಲ್‌ಹಲ್ ಕಿರಿದ್ರು ! ಶಾನು ಇರ್ಲೀಂತಂದವನೆ—
ಕೋಟ್ ಜೇಬ್‌ಹತ್ರ ಪರ್‌ಪರ್ ಹರ್ದು ತೋಳ್ಕುಚ್ಕೊಂಡು ಬಂದವ್ನೆ !

ಮೊಳಕೈ ಮುಚ್ದ ! ತೋಳ್ನೂ ಮುಚ್ದ !
ಆದ್ರೇನ್ ? ಕೋಟ್ಗೆ ಉದ್ದಾನೇ ಸಾಲ್ದು !
ಬೀದಿಯೋರೆಲ್ಲಾ ಬಿದ್‌ಬಿದ್‌ನಕ್ರು :
“ ನಂ ಶಾಮುಂಗೆ ಬುದ್ಧೀನೇ ಸಾಲ್ದು ! ”
ಶಾಮಣ್ಣಾಂದ : “ಯಾಕ್ ನಗತೀರ್ರೋ ?
ನಿಂ ಕೋಟುದ್ದ ! ನೆಲ ಗುಡಿಸೋ ಪೊರಕೆ !
ನನ್ ಕೋಟುದ್ದ ಸರಿಯಾದ್ ಅಳತೆ !
ಇದು ಏನ್ ನಿಮಗೆ ಅರ್ಥಾಗೋ ಸರಕೆ ! ”

* * *

ಅಲ್ಲಿಂದೀಚ್ಗೆ ಯಾರಾರೂವೆ ಕಾಲಗೆಡಿಸಿದ್ರೆ ಕೈಹಿಡಿದಿದ್ ಕೆಲಸ
ನೋಡ್ದೋರೆಲ್ಲ ಬಿದ್‌ಬಿದ್‌ನಕ್ಕು, ‘ಶಾಮಣ್ಣಂಗಿ’ ಅಂತಾರಾ ಹೊಲಸ !

—ಕೈಲಾಸ.



# ಈ ಐಕ್ಯೀಕರಣ






“ ಏನಪಾ ! ಈ ಆಂಧ್ರದವರೆಲ್ಲಾ ತಮ್ಮ ಪ್ರಾಂತ ಒಟ್ಟುಗೂಡಿಸ್ತಾರಂತ ನಮ್ಮ ಕನ್ನಡ ಸೀಮಿ ಎಂದಪಾ ಒಂದಾಗೋದು ; ಅತ್ತ ಮೈಶೂರವರು ನಮ್ಮ ದೊರೆ ನಿಮಗೂ ಇರಲಿ, ನಮ್ಮ ಜತೆ ನೀವೂ ಕೂಡ್ರಿ ಅಂತಾರ. ನಮ್ಮವರು ಒಲ್ಲೆ ಅಂತಾರ. ನಮಗೆ ಮೊದಲು ದೊರೆ ಇಲ್ಲ. ಈಗೂ ಬೇಡ ಅಂತ, ನಮ್ಮ ಜತೆ ನೀವೂ ಕೂಡಿ ಅಂತ- ಇದು ಹೆಂಗಪಾ ಮುಗೀತೈತಿ ”

• • •

ಏಕೀಕರಣ ಸಭಾ ಧಾರವಾಡದಾಗ ನಡೀತು ಹೌದಲ್ಲೋ. ಆಗ ನಮ್ಮ ಬಿದ್ದಂಗಡಿಯವರು ಭಾಷಣ ಮಾಡಿದ್ದರಲ್ಲ. ಸಭೆ ಮುಗದಾಗ ಹೊರಗೆ ಬಂದವ ಒಬ್ಬ, ಇನ್ನೊಬ್ಬಾತನ್ನ ಹೀಗೆ ಕೇಳಿದನಂತೆ. ಅದಕ ಆಗ ಇನೊಬ್ಬ ಹೀಂಗಂದ ನಂತಪ.

★ ★ ★

‘ ಎಲಾ ! ಇದಕ್ಯಾಕಪ ಬೊಬ್ಬೆ ಹೋಡೀತಿ ನೀ. ಈಗ ನೋಡಪಾ ! ಸುಂಕ ತೆರಿಗೆ ಎಲ್ಲಾ ದೆಹಲಿ ಸರ್ಕಾರಾನೇ ಮೈಶೂರಿಂದ ವಹಿಸಿ ಕೊಳ್ತೈತಿ ಅಲ್ಲೋ.

ಮುಂದ ರೈಲು ಅಂಚಿ ಸೈನ್ಯ ಎಲ್ಲಾ ಕೈಗೆ ಹಾಕ್ಕೊಳ್ತೈತಿ. ಮೈಶೂರಾಗ ಈ ಪಾನ ನಿರೋಧ ಪೂರ್ತಿ ಬಂತೆಂದರ ವರಮಾನ ಕೆಳಗ ಬೀಳ್ತೈತಿ. ಹಾಂಗೇನ ಲೆಕ್ಕ ತನಿಖೆ ಎಲ್ಲಾ ದೆಹಲೀನೆ ಮಾಡ್ತೈತಿ. ಹಿಂಗ ಎರಡು ಮೂರು ವರ್ಷ ಆಯ್ತನ್ನು. ಆಮ್ಯಾಲ ಮೈಶೂರಾಗ ಏನು ಹಣಾ ಉಳೀತದಪಾ- ಅವರು ಮೇರೀಲಿಕ್ಕ— ನಮ್ಹ್ಯಾಂಗೇ ಆಗ್ತಾರ. ಜರೀ ರುಮಾಲ ಹೋಗ್ತದಾ. ಕೋರೀ ಪೇಟ ಬರ್ತದ. ಮೈಸೂರು ಸಣ್ಣಕ್ಕಿ ಹೋಗ್ತದಾ. ಭಕ್ರಿ ಜಗ್ಗಿಹೊಡೀಲಿಕ್ಕ ಹತ್ತಾರ. ಅಂದ ಮ್ಯಾಲೆ ನಮ್ಮ ಜತೀ ಕೂಡಲಿಕ್ಕೆ ಏನೂತ್ರಾಸು ಆಗೋಣಿಲ್ಲ.

ಏನಪಾ ! ಇಷ್ಟು ಸುಲಭ ಆಗ್ತದಾ ! " ಮೈಶೂರಿನಾಗ ಚಿನ್ನದಗಣಿ ಅದ ಅಂತಾರ. ಕಬ್ಬಿಣದ ಕಾರ್ಖಾನೆ ಅದನಂತ. ಹಳ್ಳಿಹಳ್ಳಿಗೂ ವಿದ್ಯುದ್ದೀಪ ಅವೆ. ಅಲ್ಲಿ ವ್ಯಾಪಾರ ಚಲೋಅವೆ. ವಿಮಾನ ಕಾರ್ಖಾನೆ ಅವೆ. ಟೆಲಿಫೋನ್ ಕಾರ್ಖಾನೆ ಅವೆ. ಹತ್ತಿ ಗಿರಣಿಗಳದ್ದಾವ. ಅಲ್ಲಿ ಬಡತನ ಹ್ಯಾಂಗ ಬರ್ತದಪ್ಪಾ !"

" ಭಾಳ ಶಾಣೇಶ ನೀನು ! ಚಿನ್ನದಗಣಿ ಅದ ಬರೋಬ್ಬರಿ. ಆದರ ಅದು ಕಂಪಣೀದು ಅದ. ಕಬ್ಬಿಣದ ಕಾರ್ಖಾನೆ ಅದ ಖರೆ. ಅದರಾಗ ನಷ್ಟ- ವಿದ್ಯು ದ್ದೀಪ ಅವರ ರಸ್ತೇನೆಲ್ಲಾ ಬೆಳಗಲಿ ಬಿಡು ! ವಿಮಾನ ಕಾರ್ಖಾನೆ ಟೆಲಿಫೋನ್ ಕಾರ್ಖಾನೆ ಎಲ್ಲಾ ದೆಹಲೀದಪ್ಪಾ ! ಹತ್ತಿ ಗಿರಣಿಗಳಿದಾವೆ. ಆದರೆ ನಾವು ಅರಳೀ ಕೊಟ್ಟರೆತಾನೆ ಅವರಿಗೆ ಗಿರಣಿ. ವ್ಯಾಪಾರ ಎಲ್ಲಾ ಮಾರ್ವಾಡಿಗಳದಪಾ. ಇಲ್ಲಾ ಸಿಂಧಿಗಳದಪಾ. ಇಲ್ಲಾ ಮಂಗಳೂರಿನವರದಪಾ ಅಂದಮ್ಯಾಗೆ ಮೈಸೂರವರಿಗೆ ಏನು ಉಳೀತದಪಾ ! ಮೈಸೂರು ಎಲೆ ಅಡಿಕೆ ! ಮೈಸೂರು ರುಮಾಲ ! ಅದೆಷ್ಟು ದಿವಸ ನಡೀತದಪಾ ".

" ಚಲೋ ಅಂದೀನೀ ಹಾಂಗ ಬಡತನ ಅವರಿಗೆಲ್ಲಾ ಬಂದರ, ನಾವ್ಯಾಕ ಅವರ ಜತೆ ಕೂಡಬೇಕಪಾ ! ನಾವೇ ಬೇಡು ಅನ್ನೋಣು "

ಭಲೆ ! ಭಲೆ ! ಆಸ್ಥಿತೀಗೆ ಬರ್ತದಪಾ ! ಆದರೆ ಆಗ ನಾವು ಒಂದಾಗೋಣ. ನಮ್ಮ ಅರಳೆ ಅವರ ಗಿರಣಿಯಾಗ. ಅವರ ದೀಪ ನಮ್ಮ ದೇಶದಾಗ. ನಮ್ಮ ಪೇಟಾ ಅವರಿಗೆ ಕಟ್ಟೋಣಾ. ಅವರ ರುಮಾಲಾ ನಾವು ಸುತ್ತೋಣಾ. ಆಗ ಏಕೀಕರಣ ಏನು ಬಂತಪಾ ! ರಗಡು ಐಕ್ಯೀಕರಣ ಆಗೇ ಆಗ್ತದ. ಇದಕ್ಯಾಕಪಾ ಈಗ ನಾವು ಬೊಬ್ಬಿ ಇಡೋದು.

ಎಲ್ಲಾ ಛಲೋ ಆಗ್ತೈತಿ. ಎರಡುವರ್ಷ ಸುಮ್ಮನಿರು.

——— ೦ ———

# ವೀಣೆ ಭೋಜಣ್ಣ

—o—

ಹತ್ತು ವರ್ಷದ ಮೇಲೆ ಭೋಜಣ್ಣ ಸಿಕ್ಕ. ಮೊದಲು ಗುರ್ತೇ ಸಿಗಲಿಲ್ಲ. ಅವನೇ ಹಿಂದಿನಿಂದ ಬಂದು ಗುದ್ದಿ ಕಚಗುಳ್ಳಿ ಇಟ್ಟು ನೆನಪಿಗೆ ತಂದುಕೊಟ್ಟ. ರಾಮನವಮಿ ಕಾಲ ಎಲ್ಲೆಲ್ಲೂ ಸಂಗೀತದ ಸೂರೆ. ಒಂದು ಕಾಗದಾ ತೋರಿಸಿ ನನ್ನನ್ನು ಡಂಗು ಬಡಿಸಿ ಬಿಟ್ಟ. ನಾಳೆ ಶಂಕರಪೇಟೆ ರಾಮ ಮಂದಿರದಲ್ಲಿ ಭೋಜಣ್ಣನ ವೀಣೆ. ಕಾಲೇಜು ಆರ್ಕೆಸ್ಟ್ರಾದಲ್ಲಿ ತಂಬೂರಿ ಹಿಡಿಯುತ್ತಿದ್ದ ಭೋಜ ಈಗ ಈ ಪಟ್ಟಕ್ಕೇರಿರುವುದು ಕಂಡು ಪರಮ ಸಂತೋಷವಾಯಿತು.

ನಮ್ಮ ತಂದೆಯವರಿಗೂ ಭೋಜನ ಮಾವನವರಿಗೂ ಗೋಳಸ್ಯ ಕುಂಟಸ್ಯ. ಅರ್ಥಾತ್ ಅವರ ಮಾವ ಕುಂಟುತ್ತಾ ಅವರ ಗೋಳುಕರೆ ಕೊರೆಯುತ್ತಾ ತಂದೆ ಯವರ ಜೊತೆಗೆ ಹವ ಕುಡಿಯುವ ಪದ್ಧತಿ. ಆದರೆ ಆ ಕುಂಟೇ ಭೋಜನ ನೆಂಟೆಂದು ನನಗೆ ಭೋಜ ಹೇಳಿದಮೇಲೆ ವೇದ್ಯವಾಯಿತು. ಭೋಜನನ್ನು ಅಂಗ ಲಾಚಿ ಮನೆಗೇ ಭೋಜನಕ್ಕೆ ಕರೆತಂದೆ. ತಂದೆಯವರು ಸಂತೋಷದಿಂದ ತಮ್ಮ ಮಿತ್ರನ ಅಳಿಯನನ್ನು ಸ್ವಾಗತಿಸಿದರು.

"ರಾಯರೆ, ನಮ್ಮ ಮಾವಯ್ಯ ನಿಮ್ಮ ಸ್ನೇಹಿತರೂ ಅಂದಮೇಲೆ ನೀವು ಮಾವಯ್ಯನಿಗಿಂತಲೂ ಪೂಜ್ಯರು." ಎಂದು ಭೋಜ ಪ್ರಾರಂಭಿಸಿದ. ಮೊದಲಿಂದ ಬಲುಮಾತು ಬಲುಮಾತು ಭೋಜನದು. ಯಾವುದೊ ಗೃಹಕೃತ್ಯದ ಬಾಬತ್ತಿನ ವಿಷಯವಾಗಿ ನನ್ನ ತಮ್ಮನಿಗೂ ತಂದೆಯವರಿಗೂ ಅದೇ ಸಮಯದಲ್ಲಿ ಮಾತು ನಡೆಯಿತು ಸುಗ್ಗೇ ಕಾಯಿಗೆ ಬದಲು ಹೀರೇಕಾಯಿ ತರಬೇಕಿತ್ತು ಮಾರ್ಕೆಟ್ಟಿ ನಿಂದ ಎಂದು ತಂದೆಯವರು ತಮ್ಮನಿಗೆ ಸಿಟ್ಟು ಮಾಡಿದರು. ಭೋಜಣ್ಣ ತಕ್ಷಣವೆ "ರಾಯರೆ ಆ ಹುಡಗನ್ನ ಯಾಕೆ ಸತಾಯಿಸ್ತೀರ- ನನಗೆ ಸುಗ್ಗೇಕಾಯಿ ಗೊಜ್ಜೇ ಆಗಲಿ ಚಿಂತೆಯಿಲ್ಲ ...... ನನಗಾಗಿ ಹಿರೇಕಾಯಿ ತರಿಸಬೇಡಿ" ಎಂದು ಹೇಳಿದ. ಸೂಕ್ಷ್ಮವಾಗಿ ತನಗೆ ಪ್ರಿಯವಾದ ಸುಗ್ಗೆ ಗೊಜ್ಜು ಮಾಡಿಸಿಕೊಂಡ.

ಚೊಕ್ಕ ಭೋಜನವಾದನಂತರ ತಾಂಬೂಲ ಸೇವಿಸುತ್ತಿದ್ದೆವು. ಕಾಲು ತೊಳೆದು ಎಲೆ ಮುಂದೆ ಪದ್ಮಾಸನಾ ಹಾಕಿದ ಸಮಯದಿಂದ, ಮಜ್ಜಿಗೆ ಅನ್ನದವ ರೆಗೂ ಭೋಜ ಒಂದೇ ಸಮ ತನ್ನ ವೀಣಾ ವೈಖರಿಯ ವಿವಿಧ ಕಚೇರಿಗಳ ರಾಗಂ ತಾನಂ ಪಲ್ಲವಿಗಳ ವರ್ಣನೆ ಮಾಡುವ ನೆಪದಲ್ಲಿ ಭೈರಿಗೆ ಹಾಕಿ ಕೊರೆದು ಕೆಡ ವಿದ. ತಂದೆಯವರು ಆಗಲೆ ಭೋಜನನ್ನ ಒರೆಹಚ್ಚಿ ನೋಡತೊಡಗಿದ್ದು. ನನ್ನನ್ನೂ ಆಳವಾಗಿ ನೋಡಿ "ಇದೇನು ಬೊಗಳೋ ನಾಯಿ ಅಂತ ತೋರುತ್ತೆ" ಎಂಬ

ಅರ್ಥಪೂರಿತ ದೃಷ್ಟಿ ಬೀರಿದರು. ಭೋಜನಿಗೆ ಇದು ಹೊಳೆಯದೆ ತನ್ನ ತುತ್ತೂರಿ ಊದುತ್ತಲೇ ಇದ್ದ. ಮಾತು ಅವನ ಮದುವೆಗೆ ತಿರುಗಿತು "ರಾಯರೇ! ಮಾವಯ್ಯ ನನ್ನ ಕಂಡದ್ದು ಕೋದಂಡರಾಮ ಗುಡಿಯಲ್ಲಿ. ಕೈಲಿ ವೀಣೆ ಹಿಡಿದು ಕುಳಿತಿದ್ದೆ ....... ಸಂಜೆಯೇ ಮನೆಗೆ ಕರೆದೊಯ್ದರು. ನಡು ಮನೆಯಲ್ಲಿ ಜಮಖಾನೆ ಹಾಸಿ ಮೂಲೆಯಲ್ಲಿ ಹೊದ್ದು ಮಲಗಿದ್ದ ವೀಣೆಯನ್ನು ಎಬ್ಬಿಸಿ ನನ್ನ ಕೈಗಿತ್ತರು. ಕಿವಿಗೆ ಖಡಕು- ಹತ್ತು ಬೆರಳಿಗೆ ಇಪ್ಪತ್ತುಂಗರ- ಸಿಲ್ಕಿನ ಜುಬ್ಬ- ನಾಟ್ಯಾಚಾರ್ಯನ ಕೇಶ- ಸಾಕ್ಷಾತ್ ದಕ್ಷಿಣಾ ಮೂರ್ತಿ- ಸ್ವರೂಪದಂತೆ ರಾರಾಜಿಸಿದೆ ಕೈಗೆ ತುಪ್ಪ ಸವರಿಕೊಂಡು ತರಂಗ ತರಂಗವಾಗಿ ಎಬ್ಬಿಸಿದ ವೀಣಾನಾದ ಇಡೀ ಮನೆಯನ್ನಾವರಿಸಿತು ಕೂಡಲೆ ಮಾವನವರು ಕುಂಟುತ್ತಾ ಬಳಿಸಾರಿ- ತಲೆ ತೂಗಿ 'ಭೋಜಾ ನನ್ನ ಕುವರಿಯ ಪುಣ್ಯ ಇಂಥಾ ಕಲಾವಿದನ ಕೈ ಹಿಡಿಯುವ ಭಾಗ್ಯ ಪಡೆದದ್ದು' ಎಂದು ಹಸ್ತ ಜೋಡಿಸಿದರು. "ಇಷ್ಟು ಹೇಳಿ ಕಣ್ಣೊರಸಿಕೊಂಡ ಭೋಜ. ನಮ್ಮ ತಂದೆಯವರು ನನಗೆ ಇದೇ ಸಮಯಕ್ಕೆ ನಮ್ಮ ವೀಣೆ ತಂದು ಭೋಜನ ಕೈಗೆ ಕೊಡುವುದಾಗಿ ಹೇಳಿದರ.. ಅವನು ಮುಂದುವರಿಸಿದ "- ಅಯ್ಯಾ ಭೋಜ ನನ್ನ ಮಗಳ ಪುಣ್ಯ ಸಾಕ್ಷಾತ್ ತುಂಬುರರ ಸೇವೆ ಸಿಕ್ಕದ್ದು. ನಿನ್ನ ವಿದ್ಯೆ ನೋಡಿ ಬೇಡುತ್ತೇನೆ ಮುಖವನ್ನಲ್ಲ. ದಯಮಾಡಿ ತಾಳಿ ಬಿಗಿ- ಮನೆ ತುಂಬಿಸಿಕೊ ಮಾವನ ಮಗಳ, ಉರಟಣೆ ಸ್ವೀಕರಿಸು ಎಂದು ಅಂಗಲಾಚಿದರು ಮಾವಯ್ಯ ಆದರೇ" ಎಂದು ದಳ ದಳನೆ ಕಣ್ಣಲ್ಲಿ ನೀರು ಸುರಿಸಿದ ಭೋಜಣ್ಣ. ಕೈಲಿದ್ದ ವೀಣೆ ಮೇಲೆ ಬೆರಳಾಡಿಸಲು ಪ್ರಾರಂಭಿಸಿದ. ಯಾವ ಅಮರ ಸಂಗೀತ ಹೊರಡುವುದೋ ಎಂದು ಕಾದಿದ್ದೆವು. ಇಡೀ ಮನೆಯೇ ಕಾತುರತೆಯಿಂದ ಕಾದಿದೆ- ಭೋಜ ಮೀಟಿ ಮೀಟಿ ಹೊರಗೆಡವಿದ. "ಅಜೂಜು ಮಲ್ಲಿಗೆ ಜಾಜಿಯ ಸಂಪಿಗೆ.... ..." ಎಂಬ ಶಿಶುಸಾಹಿತ್ಯವನ್ನು. ಕಾದಿದ್ದ ಜನ ಜಂಗುಳಿ ಗಹ ಗಹಿಸ ಬೇಕಾದದ್ದು ತಂದೆಯವರ ಕೆಂಗಣ್ಣು ನೋಡಿ ನಗುತಡೆದದ್ದಾಯಿತು. ಭೋಜನ ಕಣ್ಣಿಂದ ಧಾರೆ ಧಾರೆಯಾಗಿ ನೀರು ಸುರಿಯಿತು. "ಏಕೆ ಅಳು" ಎಂದು ತಂದೆಯವರ ಪ್ರಶ್ನೆ. "ಆಸಾಧ್ವಿ ತೌರು ಸೇರಿದಳು. ಮಾವ ಕೈ ಬಿಟ್ಟ....ಮೊದಲೇ ತಿಳಿದಿದ್ದೆ ಹಿರೇರು ಹೇಳುವುದು ಸುಳ್ಳಲ್ಲ ನೋಡಿ- ಕುಂಟು ನೆಂಟಲ್ಲಾಂತ- ನಿನ್ನ ತಂತಿ ಪುಣ್ಯ ಚೆನ್ನಾಗಿಲ್ಲ ಎಂದು ಹೃದಯ ತಂತಿ ಹರಿದರು ಮಾವಯ್ಯ ......" ಎಂದು ಕೈಲಿದ್ದ ವೀಣೆ ಮತ್ತೆ ತರಂಗ ತರಂಗವಾಗಿ ಮಿಡಿಯಿತು. ಮತ್ತಾವ ಅಮರ ಗಾನ ಸುಧಾರಸ ಹೊರಚಿಮ್ಮುವುದೋ ಎಂದು ಕಾದಿದ್ದಾಯಿತು. ಈ ಬಾರಿ ಬಂದ ನಾದ "ಚಂದಕ್ಕಿ ಮಾಮ- ಚಂದಿರ ಸೋಮ........" ಎಂದು ಹೇಳಿತು- ತಡೆಯದಾಗದೆ ನಾನು ಗಹ ಗಹಿಸಿಬಿಟ್ಟೆ. ಮೆಲ್ಪಂಕ್ತಿಯನ್ನನು ಸರಿಸಿ ಈ ಇಡೀ ಮನೆಯೇ ಕಿಲ ಕಿಲನೆ ನಕ್ಕಿತು. "ಸದ್ದು!!" ಎಂಬ ತಂದೆಯವರ ಘರ್ಜನೆ ಮತ್ತೆ ಶಾಂತ ವಾತಾವರಣ ತಂದಿತು. ಭೋಜ ದುಃಖಪೂರಿತ ಕಣ್ಣುಗಳಿಂದ ತಂದೆಯವರನ್ನು ನೋಡಿ- ಪ್ರಾರಂಭಿಸಿದ. ಮಾವನವರೇ ಮೂರು ಪಾಠ ಗೊತ್ತುಮಾಡಿಕೊಟ್ಟೆ

ದ್ದರು. ತಿರುಚಿರಪಲ್ಲಿ ವಿದ್ವಾನ್ ಸಾವೇರಿ ಶಂಭು ಭಾಗವತರ ಶಿಷ್ಯ ಸ್ವಾಮಿ ಈ ಘಟ. ಹಾಗೇಂತ ಹೇಳಿದ್ದಕ್ಕೆ ಲಾಯರ ಮನೆಯವರೊಬ್ಬರು ನಿಮಗೆ ಪಾಲಗವೂ ಬರುತ್ತೆ? ಎಂದು ಹುಬ್ಬು ಹಾರಿಸಿದರು. ನಾನು ' ತಿರುಚಿರಪಲ್ಲಿಯವರೆಲ್ಲಾ ಮ್ಯೂಳದವರೇ ' ಎಂದು ಮೂಗು ಕೆರೆದುಕೊಂಡಾಗ ಅವರು " ಅದಕ್ಕಲ್ಲಾ ನಿಮ್ಮ ಕ್ರಾಪು ಖಡಕು ಕತ್ತಿನ ಕಿರುಸರ ಪೀತಾಂಬರಿಯ ಜುಬ್ಬ ನೋಡಿ ಹಾಗೆಂದವು. ತಪ್ಪುತಿಳಿಯಬೇಡಿ ಮುಂದಕ್ಕೆ ಹೋಗ್ಬಿಟ್ಟು ಬನ್ನಿ" ಎಂದು ಬಾಗಿಲು ಮುಂದೆ ಮಾಡಿಕೊಂಡು ನಡೆದೇ ಬಿಟ್ಟರು. ನೋಡಿದಿರಾ ಆ ಪಾಪಿಗಳ ಕೊಬ್ಬು ? ಕೊಂಚ ಹೊತ್ತು ಮೌನ-ನಂತರ ವೀಣೆ ಮತ್ತೆ ತಾನಂ ದಾನಂ ದಹನಂ ಎಂದು ಟ್ಯೊಂಗಟ್ಟ ತೊಡಗಿತು. ಈ ಭಾರಿ ಹೊರಟ ತಾನಂ " ರತ್ತೊ ರತ್ತೊ ರಾಯನ ಮಗಳೆ.... "

ತಂದೆಯವರು " ಭೋಜಣ್ಣಾ ಇದೇ ವೀಣೆ ಭಾಗವತರ ಪಾಠ ? " ಎಂದು ಕೇಳೀ ಬಿಟ್ಟರು. " ಅಲ್ಲಾ ರಾಯರೆ ಇದೇ ನನ್ನ ಸತಿಯ ಪ್ರಿಯವಾದ ಪದಗಳು. ಮತ್ತೆ ಮನೆ ಮಾಡಿ ಮನುಷ್ಯನಾಗಬೇಕಾದರೆ ಸುಂಕದಪೇಟೆ ರಾಮ ಮಂದಿರದ ಕಚೇರಿ ಆಗಬೇಕು............., ಆ ಕಚೇರಿ ಆಗಬೇಕಾದರೆ ವೀಣೆ ಬರಬೇಕು. ಆ ವೀಣೆ ಬರಬೇಕಾದರೆ ತಮ್ಮ ಸಹಾಯ ಅತ್ಯಗತ್ಯ " ಎಂದು ಅಂಗ ಲಾಚಿದ. ಇಡೀ ಮನೆಯೇ ಪೌಹಾರಿತು ನಾನಂತೂ ಸುಂಕದ ಕಚೇರಿ ಕೇಳಬೇಕೆಂದು ಆಸೆಯಿಂದ ಇದ್ದದ್ದು, ಈ ಪ್ರಾಣಿಯ ಸಮಸ್ಯೆ ಬಗೆಹರಿಸು ವುದು ಹೇಗೆ ಎಂದು ಚಿಂತಿಸಿದೆ. ತಂದೆಯವರು " ಭೋಜ ಅದೇನು ನನ್ನ ಸಹಾಯ ? " ಎಂದು ಕೇಳಿದರು. ಭೋಜ ನಾಚಿಕೆಯಿಂದ ನೆಲಕೆರೆದು ಆಮೇಲೆ ಹೇಳಿದ " ಈ ಸಂಗೀತದವರ ಹಣೇಬರವೇ ಹೀಗೆ ನೋಡಿ. ಈಗ ಮೂವತ್ತೈದು ರೂಪಾಯಿಗೆ ವೀಣೆ ಅಡವು ಇಟ್ಟಿದ್ದೇನೆ. ಬಿಡಿಸಿ ಕಚೇರಿ ನೆಡೆಸಿದರೆ ನೂರು ರೂಪಾಯಿ ಬರುತ್ತೆ ಕಚೇರಿ ಮುಗಿದಕೂಡಲೆ ನಿಮ್ಮ ಸಾಲ ತೀರಿಸಿ ರೈಲು ಹತ್ತಿ ಹೆಂಡ್ತಿ ಊರಿಗೆ ಹೋಗಿ ಆಕೆನ್ನ ಕರೆತಂದು ಮನೆ ಮಾಡ್ತೇನೆ. ನಾಲ್ಕು ಪಾಠದ ಮನೆ, ಮದುವೆ ಕಚೇರಿಗಳು, ಆಕಾಶವಾಣಿ ದೇವರು ಹೇಗೊ ನಡೆಸ್ತಾನೆ. ಈಗ ತಾವು ಅಷ್ಟು ಉಪಕಾರಮಾಡಿ ವೀಣೆ ಬಿಡಿಸಿ ಕೊಡಿಸಬೇಕಾಗಿ ಬೇಡುವೆ " ಎಂದು ದುಃಖದಿಂದ ಹೇಳಿ ಮತ್ತೆ ತಾನಂ ದಾನಂ ಪ್ರಾರಂಭಿಸಿ " ಉದುರವೈರಾಗ್ಯ ವಿದು ... " ಎಂದು ಮಿಡಿಸಿದ. ತಂದೆಯವರು ಮರುಕಗೊಂಡು ಐದು ರೂಪಾ ಯಿನ ಏಳುನೋಟು ತರುವಂತೆ ಹೇಳಿದರು. ನಾನು ತಂದು ಭೋಜನ ಕೈಗಿತ್ತೆ ಕೂಡಲೆ ಅವನು " ಧನ್ಯ ಧನ್ಯ ವಿಪುದ ಮಾನ್ಯ ..." ಎಂದು ನುಡಿಸಿ ವಿನಯದಿಂದ ಬಾಗಿ ಶಲ್ಯ ಏರಿಸಿ ಹೊರಟುಹೋದ.

ಮನೆಯಲ್ಲಿ ಶಾಂತತೆ ತಲೆದೋರಿದಂತಾಗಲು ನಾನು ಸಂಜೆ ಭೋಜನ ಕಚೇರಿ ಕೇಳಲು ಹವಣಿಸತೊಡಗಿದೆ.

ಸಂಜೆ ಸುಂಕದಪೇಟೆ ರಾಮ ಮಂದಿರ ಸೇರಿದಾಗ ಮಿತ್ರರಾದ ಮಹೇಶ ಮತ್ತು ಬೋರಣ್ಣ ಇವರುಗಳೂ ಬಂದಿದ್ದರು. ಅವರೂ ಭೋಜನ ವೀಣೆ ನುಡಿತ ಕೇಳಲು ಬಂದಿದರೆಂದು ತಿಳಿದುಬಂತು. ವಿಪರೀತ ಜನ ಸೇರಿದ್ದರು ನಾನು ಭೋಜನಿಗಾಗಿ ಏರ್ಪಡಿಸಿದ್ದ ಸ್ಥಳಕ್ಕೆ ಎದುರಿಗೇ ಕುಳಿತುಕೊಳ್ಳಲು ಕಾದಿದ್ದೆ. ಚಪ್ಪಾಳೆಗಳ ನಡುವೆ ಮೈಕ್ರೋಫೋನಿನ ಮುಂದೆ ವೈಣಿಕರು ಬಂದು ಕುಳಿತರು. ಅವರು ಭೋಜನಾಗಿರಲಿಲ್ಲ. ಅವರ ಹೆಸರೇನೆಂದು ಕೇಳಲಾಗಿ ವೀಣಾನಾದ ಪುರಂ ಭೋಜ ರಾಜುಲುಗಾರು ಎಂದು ತಿಳಿದುಬಂತು. ನಾವು ಮೂವರು ಗೆಳೆಯರೂ ಬೆವರೊರೆಸಿಕೊಳ್ಳುತ್ತಾ ಹೊರಗಡೆ ಬಂದು ಸುಸ್ತಾಗಿ ನಿಂತೆವು.

ಮಹೇಶ- ಬೋರಣ್ಣ ಇವರುಗಳಿಂದಲೂ ಭೋಜ ತನ್ನದೇ ಕಚೇರಿ ವೀಣೆಗಳ ವರ್ಣನೆಮಾಡಿ ನೇವತ್ತು ನೇವತ್ತು ಕಿತ್ತುಕೊಂಡು ಕಂಬಿ ಕಿತ್ತಿದ್ದ. ತನ್ನ ಹೆಸರಿನವರೇ ಮಾಡುವ ಕಚೇರಿ ತನ್ನದೇ ಎಂದು ಹೇಳಿ ಭೋಜ ಬಂಡವಾಳ ಕೂಡಿಸಿಕೊಂಡದ್ದು ಅರ್ಥವಾದಮೇಲೆ ಮನೆಕಡೆ ಕಾಲೆಳೆದವು.

ಆರು ವರ್ಷದಮೇಲೆ ಮತ್ತೆ ಭೋಜ ಸಿಕ್ಕಿದ್ದು ಬಾಣಾವರದಲ್ಲಿ. ಬೀಡಿ ಅಂಗಡಿ ಇಟ್ಟುಕೊಂಡು ಕೂತಿದ್ದ ನನ್ನ ಕಂಡು ಕೂಗಿ ಕರೆದು ಅಂಗಡಿಯಲ್ಲಿದ್ದ ಹುರುಗಾಳು ಕೊಟ್ಟು ನೀರು ಕುಡಿಸಿ ಆದರಿಸಿದ ಕೊಂಚ ಸಮಯಾನಂತರ ಅವನೇ ಬಾಯಿಬಿಟ್ಟ. ‘‘.... ಅವತ್ತು ಹಾಗೆ ಹೇಳದಿದ್ದಲ್ಲಿ ನಾನು ಮನುಷ್ಯನೇ ಆಗುತ್ತಿರಲಿಲ್ಲಕಣಯ್ಯಾ.... ನಿಮ್ಮಲ್ಲಿಂದ ಹಣ ತಂದು ವೀಣೆ ಬಿಡಿಸಿಕೊಂಡು ಮತ್ತೆ ಮಾರಿ ಆ ದುಡ್ಡಿನಂದ ಈ ಅಂಗಡಿ ತೆರೆದೆ... ಸಂಗೀತ ನಂಬಿದೋನು ಸತ್ತೆ...... ಅದರಲ್ಲೂ ವೀಣೆ ನಂಬಿದೋನಿಗೆ ವಾರದನ್ನವೇ ಗತಿ... ಅದಕ್ಕೆ ನೋಡು ನಾನು ಖಡಕು ಚೈನು ಮಾರಿ ಲೈನು ಬದಲಾಯಿಸಿದೆ... " ಎಂದು ಬೀಡಿ ಹಚ್ಚಿ ಆಳವಾಗಿ ಹೊಗೆ ಕುಡಿದು, ಗಲ್ಲಾಕ್ಕೆ ಕೈ ಹಾಕಿ ಏಳು ಐದು ರೂಪಾಯಿನ ನೋಟು ತೆಗೆದು ‘ ಇಕೋ ಇದನ್ನ ನಿಮ್ಮ ತಂದೆಯುವರಿಗೆ ಕೊಡು.... ಮನೆಗೇ ಊಟಕ್ಕೆ ಬಂದುಬಿಡು- ಅವಳು ಇಲ್ಲೇ ಇದ್ದಾಳೆ ಎರಡು ಮಕ್ಕಳು- ಮಾವ ಸತ್ತು ಸ್ವರ್ಗ ಸೇರಿದ.... ಎಂದು ಮಳಿಗೆ ಬಾಗಿಲು ಹಾಕಿ ಊಟಕ್ಕೆಂದು ಮನೆಗೆ ಕರೆದೊಯ್ದ ಭೋಜಣ್ಣ

ದಾಶರಥಿ ದೀಕ್ಷಿತ್.

# ಆ-ಗಂತುಕ

—— ೦ ——

ನನ್ನ ಅನುಭವದಲ್ಲಿ ಆಗಿದೆ ; ನಿಮಗಾಗಿದೆಯೋ, ಏನೊ ? ಇದುವರೆಗೂ ಆಗದಿದ್ದರೂ, ಮುಂದೆ ಆಗಬಹುದು– ಇದೇ ತೆರನ ಅನಾಹುತ ! ಆದ್ದರಿಂದ, ಜಾಗರೂಕರಾಗಿರುವುದೇ ಮೇಲು ಇಂಥ ವಿಷಮ ಸನ್ನಿವೇಶ ಬಂದೊದಗಿದಾಗ, ಥಟಕ್ಕನೆ ಅದರ ಪರಿಹಾರ ಏನೆಂದು ಹುಡುಕುವುದಕ್ಕಿಂತ, ಅನುಭವಸ್ಥರಾದ ನನ್ನಂಥವರಿಂದ ಉಚಿತ ಉಪಾಯವನ್ನು ತಿಳಿದು ಎಚ್ಚರಿಕೆಯಿಂದಿರುವುದೇ ಮೇಲಲ್ಲವೇ ?

ಎಲ್ಲೋ ಹೋಗುತ್ತಾ ಇರುತ್ತೇವೆ, ನಮ್ಮ ಪಾಡಿಗೆ ನಾವು, ದೀಪದ ಕಂಬ ಗಳನ್ನೆಣಿಸುತ್ತಾ, ಸಾಲಗಾರರಿಲ್ಲದ ಬೀದಿಗಳ ಮೂಲಕ ! ಯಾರೋ ಒಬ್ಬ ಪುಣ್ಯಾತ್ಮ, ಹಿಂದಿನಿಂದ ಬಂದು ಬೆನ್ನಮೇಲೆ ಗುದ್ದುತ್ತಾರೆ, ಅಥವಾ ಎದುರಿಗೆ ಬಂದು ಕೈ ಹಿಡಿಯುತ್ತಾರೆ. ಕಿವಿಯಿಂದ ಕಿವಿವರೆಗೂ ತುಟಿಗಳನ್ನೆಳೆಯುತ್ತಾ ಹಲ್ಲುಕಿರಿದು, ನಾವು ಗುರುತು ಹಿಡಿಯುವ ಮೊದಲೇ, ತಮ್ಮ ಗುಟ್ಟು ಬಿಟ್ಟುಕೊಡದೆ, ಕುಶಲ ಪ್ರಶ್ನೆ ಪ್ರಾರಂಭಿಸಿ ಬಿಡುತ್ತಾರೆ. ನಮ್ಮ ಹೆಗಲಮೇಲೆ ತಮ್ಮ ಭಾರ ಹೊರಿಸಿ, ನಮ್ಮನ್ನೂ ಎಳೆದುಕೊಂಡು, ಉದ್ದಕ್ಕೂ ಮಾತನಾಡುತ್ತಾ, ವಾದ ಬೆಳೆಸುತ್ತಾರೆ. ಅವರ ಹಲ್ಲುಕಿರಿತದ ಹಿಂದಿನ ಮಂದಹಾಸವನ್ನು ನಾವು ಹಿಂದೆ ಎಂದೋ ಕಂಡ ಹಾಗೆ ತೋರುತ್ತದೆ ; ಅವರ ನಶ್ಯದ ಮೂಗನ್ನು, ಅದರ ಪೂರ್ವಾಶ್ರಮದಲ್ಲಿ ನಾವು, ಎಲ್ಲೊ ' ವಿಾಟ್ ' ಮಾಡಿದ್ದ ಹಾಗೆ ಭಾಸವಾಗುತ್ತದೆ , ಅವರ ನಡೆಯ ಸೊಟ್ಟು, ಅವರ ನುಡಿಯ ಕಟ್ಟು, ಇವೂ ಕೂಡ ನಮಗೆ ಪರಿಚಿತವಾಗಿರುತ್ತದೆ. ಆದರೆ, ಹಠಾತ್ತನೆ, ಹಾವಿನ ಮೇಲೆ ಗರುಡ ಎರಗಿದಹಾಗೆ, ನಮ್ಮನ್ನಾಕ್ರಮಿಸುವ ಈ ' ಗೆಳೆಯ " ರನ್ನು ನಾವು ಹೇಗೆ ಮಾತನಾಡಿಸಬೇಕು ? ನಮ್ಮ ವಿಷಯವಾಗಿ ಹೆಚ್ಚು ಹೆಚ್ಚು ಪ್ರಶ್ನೆಗಳನ್ನು ಹಾಕುತ್ತ, ಅವರು ನಮ್ಮ ಗೆಳೆತನದ ಟೊಳ್ಳನ್ನು ಬಹಿರಂಗ ಪಡಿಸುವ ಮೊದಲೇ ಅವರಿಂದ ಬಚಾವಾಗುವ ಉಪಾಯವೇನು ?— ಇವೇ ಮಹಾ ತೊಡಕುಗಳು. ಅವುಗಳನ್ನು ಬಿಡಿಸುವ ಸಲುವಾಗಿಯೇ ನಾನು ಈಗ ಲೇಖನಿ ಹಿಡಿದಿರುವುದು.

ಆತ ಬಂದು ಎರಗುವ ಥಾಟಿಯಿಂದಲೇ ಆತನ ವಿಷಯವಾಗಿ ಕೆಲವು ವಿವರ ಗಳನ್ನು ನಾವು ನಿರ್ಧರಿಸಬಹುದು. ಹೆಕ್ಕತ್ತಿನ ಮೇಲೆ ಒಬ್ಬ ಕೈ ಹಾಕಿದರೆ. ಅವನು

ಸಾಲಗಾರ; ಫೋನಿನ ಮೇಲಾದರೆ, ಪೋಲೀಸಿನವ ; ಭುಜ ಮುಟ್ಟಿದರೆ, ಸಹ ಪಾಠಿ; ಕೈ ಹಿಡಿದರೆ ಅರ್ಧಾಂಗ ; ಹೊಟ್ಟೆಮೇಲೆ ಹೊಡೆದರೆ, ಸಾಹೇಬ, ಕಾಲಿಗೆ ಬಿದ್ದರೆ ಮೂವ ; ಬೆನ್ನಿಗೆ ಬಿದ್ದರೆ ತಮ್ಮ ; ಕಿವಿ ಕಚ್ಚಿದರೆ ಚಾಡಿಕೋರ; ......ಇತ್ಯಾದಿ. ಶಾಸ್ತ್ರವೇ ಇದೆಯುಲ್ಲ. ಆತ ನಮ್ಮನ್ನ ಸಂಭೋಧಿಸುವಾಗಿನ ಶೈಲಿಯನ್ನು ಪರೀಕ್ಷಿಸಿ, ನಾವು ಮುಂದಿನ ಕಾರ್ಯಕ್ರಮ ನಿರ್ಧರಿಸಬಹುದು. ಸಾರ್, ಎಂದರೆ, ಸ್ವಲ್ಪ ಪರಿಚಿತ ; ಸ್ವಾಮಿ ಅಂದರೆ ಸಲಿಗೆ ಸಾಲದು ; ಲೋ ಅಂದರೆ ಲೇವಡಿ ; ಧಡಿಯ ಅಂದರೆ ದನ- ಇತ್ಯಾದಿ. ಊಹಿಸಿಕೊಂಡು ನಮ್ಮ ಮಾತನ್ನು ತಿದ್ದಿಕೊಳ್ಳಬಹುದು.

ಆದರೆ, ಇಂಥ ಪರಿಸ್ಥಿತಿಯಲ್ಲಿ, ಆಗಂತುಕ ಯಾರು ಅಂತ ನಿರ್ಧರಿಸುವ ಮೊದಲೇ ನಾವು ಅವರೊಂದಿಗೆ ಮಾತು ಬೆಳೆಸ ಬೇಕಾಗುತ್ತದೆ. ಆತನನ್ನು ಎಲ್ಲಿ ಯಾವಾಗ ಕಂಡೆವು ಎಷ್ಟು ವರ್ಷದ ಪರಿಚಯ ನಮಗೂ ಆತನಿಗೂ, ಆತನ ಕುಲ ಗೋತ್ರಗಳ ವಿರೀತಗಳೇನು, ಎಂದೆಲ್ಲ ಮನದೊಳಗೆ ಮಥನ ಮಾಡಲು ಪುರಸೊತ್ತೇ ಇರುವುದಿಲ್ಲ ಆದ್ದರಿಂದ, ನನ್ನ ಸಲಹೆಗಳು ಈ ಬಿಕ್ಕಟ್ಟನ್ನು ಪರಿ ಹರಿಸಲು ಸಹಾಯವಾಗುತ್ತವೆ

(೧) ಅಕಸ್ಮಾತ್ ಗಂಟು ಬಿದ್ದವನು, ಜಟ್ಟುಳಿಸಿಕೊಂಡಿರುವ ಶಾಲು ಹೊದ್ದ ವೈದೀಕನಾದರೆ, " ಏನೋ, ಪರಮಾತ್ಮನ ದಯೆ ! ಇಷ್ಟರವರೆಗೂ ಸುಖ ವಾಗಿದ್ದೇನೆ. ಅಣುರೇಣು ತೃಣಕಾಷ್ಠದಲ್ಲೂ ಆತನ ಕರಣಾ ಕಟಾಕ್ಷವೇ ಪ್ರವಹಿ ಸುತ್ತಾ ಇರೋವಾಗ........ ಏನು ? ಅರ್ಥವಾಯಿತೇ ? ನಾನ ಹೇಳೋದು ! " ಅನ್ನಿ. ಆತನನ್ನ ಉಪನಿಷತ್ ಸಾಗರದಲ್ಲಿ ತೇಲಿಸಿ ಬಿಡಿ ಪರಲೋಕ ಚಿಂತೆ, ಘಟಾಕಾಶ ಪಟಾಕಾಶಗಳಲ್ಲಿ ಹಾರಿಸಿ ಬಿಡಿ, ಮನುಷ್ಯ ಆ ಬಲೆಯೊಳಗೆ ಬಿದ್ದ, ಅರ್ಧ ಮುಕ್ಕಾಲು ಗಂಟೆ ಜೀವಾತ್ಮ ಪರಮಾತ್ಮ ಅಂತ ಬಿದ್ದಾಡಿ ನಮ್ಮ ಯೋಗ ಕ್ಷೇಮವನ್ನೇ ಮರೆತು ಬಿಡುತ್ತಾನೆ ಅನುಕೂಲ ಸಂದು ಸಿಕ್ಕಾಗ ತಲೆ ತಪ್ಪಿಸಿ ಕೊಂಡು ಬಿಡಬಹುದು, ನಾವು

(೨) ಆತ ಸ್ವದೇಶಿಧಾರಿಯಾಗಿ ಲೋಕದ ನೋವು ನೋವುಗಳನ್ನೆಲ್ಲ ತಲೆಯ ಮೇಲೆ ಹೊತ್ತವನಂತೆ ಖಿನ್ನವದನನಾಗಿದ್ದರೆ, ನಮಗೆ ತುಂಬ ಅನುಕೂಲ. " ಏನಯ್ಯಾ ಧಾಂಡಿಗ" ಎಂದು ಆತ ನಮ್ಮ ಬೆನ್ನಮೇಲೆ ಬಾರಿಸಿದ ಕೂಡಲೇ, ನಾವು ಸರಕ್ಕನೆ ಅವನ ಕಡೆ ತಿರುಗಿ " ಬಿಡಯ್ಯ ಬಿಡಯ್ಯ ! ಸತ್ಯ ಅಹಿಂಸೆ ಜಗ ತ್ತಿನಲ್ಲಿ ಎಂದು ಸ್ಥಾಪನೆಯಾಗುತ್ತವೋ, ಅಂದೇ ನಮಗೆಲ್ಲ ಮೋಕ್ಷ ! " ಎಂದು ನಿಸ್ಸಂಕೋಚವಾಗಿ ಹೇಳಬಹುದು ಆ ಮಾತುಗಳು ಕಿವಿಗೆ ಬೀಳುತ್ತಲೂ, ಆತನ ಮನಸ್ಸು ಚಿಗುರಿ ಕೂಡಿ ಬಿಟ್ಟು ಹೂತು ಫಲಿಸುತ್ತದೆ. ಅಲ್ಲಿಂದ ಮುಂದಕ್ಕೆ

ಅವನು ತನ್ನದೇ ಆದ ಪ್ರತಿಭೆಯಿಂದ ಅರ್ಧ ಮುಕ್ಕಾಲು ಗಂಟೆ ಜಗದೋದ್ಧಾರದ ವಿಷಯವಾಗಿ ಒಂದು ಸ್ಫೂರ್ತಿದಾಯಕವನ್ನರ್ಪಿಸುತ್ತಾನೆ ಅವನ ಕಣ್ಣಿಗೆ ಆಗ ಕಾಣಿಸುವುದು, ನಾವಲ್ಲ; ಒಂದು ಮಹಾಸಭೆ! ಫುಟ್‌ಪಾತ್ ಅಲ್ಲ ಪ್ರಗತಿ ಪಥ. ನಾವು ನುಸುಳಿಕೊಂಡರೂ ಆತನ ಭಾಷಣ ಸಾಗುತ್ತಲೇ ಇರುತ್ತದೆ.

(೩) ಆತನ ಕೈಯಲ್ಲಿ ತೊಗಲಿನ ಚೀಲ ಒಂದಿದ್ದು, ಪಾದರಕ್ಷೆಯ ತುಂಬ ನಾನಾ ಊರುಗಳ ಧೂಳು ಕೂತಿದ್ದರೆ, ಆತನನ್ನು ಯಾವುದೋ ಪದಾರ್ಥದ ಮಾರಾಟದ ಏಜಂಟೆಂದೂ, ಅದು ಒಂದೇ ಊರಿನ ಧೂಳಾಗಿದ್ದರೆ ಇನ್‌ಷೂರನ್ಸ್ ಏಜಂಟೆಂದೂ ನಿಶ್ಚಯಿಸುವುದೇ ಜಾಣತನ ಇಂಥವರು ನಮ್ಮ ಸ್ನೇಹವನ್ನು ಬಯಸಿ, ಕಿಸೆಯನ್ನು ಮೂಸಿ, ಕೃತಕವಾಗಿ ಹಳೇ ಗೆಳೆತನವನ್ನು ಕಲ್ಪನೆ ಮಾಡುವುದೂ ಉಂಟು. ಆದ್ದರಿಂದ, ಅವರನ್ನು ಒಂದೆರಡು ನಿಮಿಷ ದುರುಗುಟ್ಟಿ ನೋಡುವುದೂ ಕ್ಷೇಮ. ಹಾಗೆ ನೋಡುವಾಗ, ಇನ್‌ಷೂರೆನ್ಸ್ ಏಜಂಟೊಬ್ಬರು ಮಾತ್ರ ಮತ್ತಷ್ಟು ವಿಕಾರವಾಗಿ ಹಲ್ಲು ಕಿರಿಯುತ್ತಾರೆ! ಉಳಿದವರೆಲ್ಲ ಕಿರಿತವನ್ನು ಕಿರಿದು ಮಾಡುತ್ತಾರೆ! ಈ ಜಾತಿಯ 'ಪರಿಚಿತ'ರನ್ನು ಮಾತನಾಡಿಸಿ ಮಾನ ಉಳಿಸಿಕೊಳ್ಳಲು ಕೆಲವು ಉಪಾಯಗಳಿವೆ "ಮನಿ ಮಾರ್ಕೆಟ್ ಟೈಟ್" "ಕಾಳ ಸಂತೆ ಕೋರರಿಗೆ ಅವಕಾಶ ಕೊಡುವುದು ಶುದ್ಧ ಅನ್ಯಾಯ", "ಇದು ಒಳ್ಳೇಯರಿಗೆ ಕಾಲವಲ್ಲ", "ಕಾನೂನುಗಳನ್ನು ಮಾಡಿ ಕಳ್ಳರನ್ನು ಶಿಕ್ಷಿಸಬೇಕು"—ಎಂಬಿವೇ ಮುಂತಾದ ಶೌರ್ಯೋಕ್ತಿಗಳನ್ನು ಪ್ರಯೋಗಿಸಿದರೆ, ಅವರು ದಾರಿ ಉದ್ದಕ್ಕೂ ತಾವೇ ಮಾತನಾಡಿ ನಮ್ಮನ್ನು ಪಾರುಮಾಡುತ್ತಾರೆ.

(೪) ಆತ ಕೂದಲನ್ನು ಇಳಿಯ ಬಿಡಿಸಿ ಕತ್ತಿಗೆ ಸಮನಾಗಿ ಕತ್ತರಿಸಿ, ತೆಳುವಾದ ಮಲ್ ಜುಬ್ಬ ಧರಿಸಿ ತೇಲುಗಣ್ಣನ್ನು ತಿರುಗಿಸಿದರೆ, ಅವನೊಂದಿಗೆ ಕಲೆಗಾಗಿ ಕಲೆ, ಉದಯಶಂಕರನ ಕಲ್ಪನೆ, ಮೃಣಾಳಿನಿಯ ಋಣ ಇತ್ಯಾದಿ ಪ್ರಸ್ತಾಪಿಸುವುದು ಲಾಭದಾಯಕ. ನಮ್ಮ ಭಾರತೀಯ ಕಲೆಗಳ ಪುನರುದ್ಧಾರವಾಗದಿದ್ದರೆ, ನಮಗೆ ಸ್ವರಾಜ್ಯ ದೊರೆತದ್ದೇ ದೊಡ್ಡ ಕಂಟಕ ಎಂದು ನೀವು ಅಂದರೆ, ಅತ ತನ್ನ ಕೇಶರಾಶಿಯನ್ನಲ್ಲಾಡಿಸಿ ಹೌದೆನ್ನುವನು. ಮೊದಲು ಚಿರಪರಿಚಿತ ಎಂಬ ನೆಪದಲ್ಲಿ ನಮ್ಮನ್ನು ಸಂಬೋಧಿಸಿದ ಆತ, ಕಲೋಪಾಸನೆಯ ಭರಾಟೆಯಲ್ಲಿ ನಮ್ಮ ಆಗುಹೋಗುಗಳನ್ನೇ ಮರೆತು ಬಿಸಿಲು ಗುದುರೆಯನ್ನೇರಿ ಸ್ವಪ್ನಲೋಕಕ್ಕೆ ಪ್ರಯಾಣ ಬೆಳೆಸುವನು. ಅದೇ ಸಮಯ ಅಂತ ನಾವೂ ತಲೆ ತಪ್ಪಿಸಿಕೊಳ್ಳಬಹುದು.

ಹೀಗೆಯೇ, ತರತರದ ಮನುಷ್ಯರಿಂದ ತಟಾಯಿಸಲು ತರತರದ ಉಪಾಯಗಳಿವೆ. ಮುಖ್ಯವಾಗಿ, ಅವರ ಗುರುತು ನಮಗೆ ಸಿಗಲಿಲ್ಲ ಎಂಬ ಸಮಾಚಾರ ಅವರಿಗೆ ತಿಳಿಯದಹಾಗೆ ನಾವು ಸಂಭಾಷಣೆಯನ್ನು ಮುಂದುವರಿಸುತ್ತಾ ಹೋಗ

ಬೇಕು. ಇದಕ್ಕೆ, ಅವರ ಬಾಯಿಂದ ಉದ್ದಕ್ಕೂ ಉಪನ್ಯಾಸ ಹೊರಡಿಸುವುದೇ ಸೂಕ್ತ. ಆ ಗಂತುಕನ ಮುಖದಲ್ಲಿ ಆಯಾಸದ ಮುದ್ರೆ ಸಾಲದ ಗೆರೆ ಮಂಗಳಾರತಿಯ ಮಸಿ ಕಂಡುಬಂದರೆ, ಅವನ ಹತ್ರ ನಾವು ಗ್ರೇಡು, ಸಬ್‌ಪ್ರೋಟೀಂ, ವರ್ಗ ಮಾತನಾಡಬೇಕು. ಆಗ ಅವರು ನಮ್ಮನ್ನು ಗೆಳೆಯರೆಂದೇ ಭಾವಿಸಿ ಮೋಸಹೋಗುವರು. ಅಪ್ಪಟ ಸೂಟ್ ಹಾಕಿರುವ ಟ್ರಿಂ ಸಾಹೇಬರಾದರೆ, ಅಮೇರಿಕಾ ದೇಶಕ್ಕೆ ಹೋಗಿ ಬರುವ ವಿಮಾನಗಳು ಈಚೆಗೆ ದರ ಕಡಿಮೆ ಮಾಡಿರುವುದನ್ನು ಪ್ರಸ್ತಾಪಿಸಿ........ನಮ್ಮ ಕೈಯನ್ನು ಕುಲುಕಿ ಏನಯ್ಯಾ ? ಹೇಗಿದೀಯಾ !" ಎಂದು ಕೂಗುವ ಅಪರಿಚಿತ, ನಗುನಗುತ್ತ ಗೆಲುವಾಗಿದ್ದರೆ........

ಶಾಂತಂ ಪಾಪಂ ! ಈಗಿನ ಕಾಲದಲ್ಲಿ. ನಗುನಗುತ್ತ ಗೆಲುವಾಗಿರುತ್ತಾರೆಯೇ ಯಾರಾದರೂ ?

ವಾ. ಕಸ್ತೂರಿ.



ಕೃಶಾಂಗಿ ಸೂರ್ಕೈಯ, ಉಟ್ಟಿದ್ದಳಲ್ಲಾ ಅಂಥಾ ಸೀರೆ ಇದೆಯೇನ್ರಿ ?

# ಭಾಗ್ಯ ?

—o—

ಇದು ಭಾಗ್ಯ, ಇದು ಭಾಗ್ಯ. ಇದು ಯೋಗ್ಯವಯ್ಯ ||ಪ||
ಇದುವೆ ಲಾಭದ ದಾರಿ, ಬದುಕು ಸುಖವಯ್ಯ ||ಅ ಪ||

ಕಲ್ಲಾಗಿರಲು ಬೇಕು ಕನಿಕರವ ಬಿಡಬೇಕು
ಬಿಲ್ಲು ಒರೆಯಲು ಬೇಕು, ಚಿಲ್ಲರೆ ಸಹಿತ ||

ವೆಲ್ಲನೆ ಪೂಜನಕೆ ವರ್ಣನ ಮಾಡಲು ಬೇಕು
ಎಲ್ಲ ಸಾಗಲು ಬೇಕು ಒಂಥು ಜನರೊಳಗೇ ||

ಬುದ್ಧಿಯಲಿ ಲೆಕ್ಕಗಳ ತಿದ್ದಿಕೊಳ್ಳಲು ಬೇಕು
ಮುದ್ದಾಗಿ ಬಳಿಬೇಕು ಪಂಗ್ನಾಮ ಹಣೆಗೆ ||

ಲಭ್ಯಹಣಾಬ್ಧಿಯೊಳು ಲೀನನಾಗಿರಬೇಕು
ಸಭ್ಯನಾಗಲು ಬೇಕು ವೇಷ ಭಾಷಣದಲಿ ||

ಲಂಚಭೋಗದ ಕೆಲಸ ನಡೆಯುತಿರಲು ಬೇಕು
ವಂಚಕರ ಕಾನೂನ ಮುರಿಯಬೇಕು ||

—o—

* * *

ವಿರೋಧಿ ಸಂವತ್ಸರ ಪಂಚಾಂಗದಿಂದ:—"ಈ ವರ್ಷ ಮೇಘ ಘರ್ಜನೆ ಬಹಳ ಹೆಚ್ಚು. ಮಳೆ ೬ ಕೊಳಗ ಮಾತ್ರ; ಗಾಳಿ ೪ ಕೊಳಗ"—ನಮ್ಮ ಪಾಲಿಗೆ ಏನು ಬರುತ್ತೋ ?

* * *

# ಏನು ಸೌಜನ್ಯ ಅಂತಾ !

——— o ———

ಶಂಕರು ಒಂದು ಒನಕೆ ಹಿಡಿದುಕೊಂಡು ನಮ್ಮನೆ ಮುಂದೆ ಹೋಗ್ತಿದ್ದ. ಕಣ್ಣು ಕಣ್ಣು ಬಿಟ್ಟು ನೋಡಿದೆ ಸಾಕ್ಷಾತ್ ಶಂಕರು ಹುಟ್ಟಿದಾಗಿನಿಂದ ಈ ನಲ್ವತ್ತು ವರ್ಷಗಳಲ್ಲಿ ಅವ ಮನೆಗೆ ಸಾಮಾನಾಗಲೀ, ಸರಂಜಾಮಾಗಲೀ ತಂದಿದ್ದು ನಾ ಕಾಣೆ ಎಲ್ಲಕ್ಕೂ ಅವನ ತಂದೆ ಅಥವಾ ಹೆಂಡತಿ. ಇಂತಹವನು ನಡು ರಸ್ತೇಲಿ ಮಧ್ಯಾಹ್ನ ಒನಕೆ ಹಿಡಿದುಕೊಂಡು ದಿಗ್ವಿಜಯಕ್ಕೆ ಹೊರಟಿದಾನೆ ಠೀವಿಯಿಂದ ಹೋಗ್ತಿದ್ದರೆ ಏನೋ ಆಗೇ ಇದ್ದಿರಬೇಕು ಇದರ ಮರ್ಮ ತಿಳಿದುಕೊಳ್ಳಲೇ ಬೇಕು, ಎಂದು ಅವನನ್ನು ಕೂಗಿದೆ. 'ಹೊತ್ತಾಯ್ತು ಕೆಲಸ ಇದೆ. ಸಾಯಂ ಕಾಲ ನೋಡ್ತೇನೆ' ಎಂದ ಸಾಯಂಕಾಲದ ತನಕ ಈ ವ್ಯಸನ ಮನಸ್ಸಿನಲ್ಲಿ ಹೇಗೆ ಅನುಭವಿಸುವುದು ? ಕಷ್ಟವಾದರೂ ಪರವಾಗಿಲ್ಲ ಅಂತ ಅವನನ್ನೇ ನಾನೂ ಹಿಂಬಾಲಿಸಿದೆ.

ನಮ್ಮರಸ್ತೆ ಕೊನೇ ಮನೆಯ ಹತ್ತಿರ ಅವನೂ ನಿಂತ. ನನಗೂ ಸಿಕ್ಕಿದ ಒಂದು ನಿಮಿಷ ಇರು, ಈ ಮನೇಗೆ ಹೋಗಿಬರ್ತೀನೆ ಅಂದ. ಮನೆಯೊಳಕ್ಕೆ ಹೋಗಿ ಎರಡು ನಿಮಿಷದಲ್ಲಿ ಬರೀ ಕೈಯಲ್ಲಿ ಬಂದ

'ಏನಯ್ಯಾ ! ಇದು.' ಎಂದು ಹುಬ್ಬು ಎತ್ತಿದೆ

'ಶ್ರೀನಿವಾಸರಾಯರು ಈ ತಾಲ್ಲೂಕಿಗೆ ಹೊಸದಾಗಿ ಬಂದಿದ್ದಾರೆ. ಒಂದು ಒನಕೆ ಬೇಕು ಎಂದರು. ತಂದು ಕೊಡೋಣ ಅಂತ ಬಂದೆ, ನೆರೆ ಹೊರೆ ಅಂದರೆ ಅಷ್ಟೂ ಮಾಡದಿದ್ದರೆ ಹೇಗೆ' ಎಂದ

ಎಲಾ ! ತನ್ನ ಮನೇಲಿ ಅಕ್ಕಿ ಇಲ್ಲದೇ ಇದ್ದರೆ, ಅಂಗಡೀಗೆ ಹೋಗಿ ತರಲು ಬೇಜಾರು ಇವನಿಗೆ, ಕಡೇಗೆ ನಶ್ಯ ಇಲ್ಲದೇ ಇದ್ದರೂ ಮೂಗು ತುರಿಸುತ್ತಾ ಕೂತಿರುತ್ತಾನೆ ಕರೀಕು.— ನಾನು ಸಿಗುವ ತನಕ- ತಾ ಹೋಗಿ ತರುವುದಿಲ್ಲ ಇಂತವ ನೆರೆಹೊರೆ ಅಂತ ಒನಕೆ ಸಾಗಿಸಿದ್ದು- ದೇವರ ಮಾಯೆ. ಅಂತಂದುಕೊಂಡೆ. ಬಗೆ ಹರಿಯಲಿಲ್ಲ.

ಸಾಯಂಕಾಲ ನಮ್ಮ ಸಿದ್ದರಾಮಯ್ಯ ಒಂದು ಬುಟ್ಟಿ ತುಂಬಾ ತನ್ನ ಮನೇಲಿ ಬೆಳೆದ ತರಕಾರಿ ತೆಗೆಸಿಕೊಂಡು ನಮ್ಮನೇ ಮುಂದೇನೆ ಹೋಗ್ತಿದ್ದ. ಮೂರುಕಟ್ಟೆ ನಮ್ಮೂರಿನಲ್ಲಿ ಪಶ್ಚಿಮಕ್ಕೆ. ಇವ ಪೂರ್ವಕ್ಕೆ ಹೋಗ್ತಿದ್ದಾನೆ ಎಲಾ ! ಇದರ ಮರ್ಮ ಏನು ? ನಾನೂ ವಾಕಿಂಗಿಗೆ ಅಂತ ಹೊರಟಿದ್ದೆ ಇವನ ಹಿಂದೆಯೇ ಹೋದೆ.

ರಸ್ತೆ ಕೊನೇಮನೆ ಹತ್ತಿರ ಇವನೂ ನಿಂತ. ಮನೆ ಒಳಕ್ಕೆ ಹೋದ. ತರಕಾರಿ ಬುಟ್ಟಿ ಮನೆ ಸೇರಿತ್ತು.

ಇವೆಲ್ಲಾ ಪ್ರಳಯದ ಸೂಚನೆ ಅಂತಂದುಕೊಂಡೆ. ಸಿದ್ದರಾಮಯ್ಯ ತರಕಾರಿ ಬೆಳೆಯೋದು ದಿಟ ಆದರೆ ಒಂದು ದಿವಸ ಒಬ್ಬರಿಗೆ ಅತ ಒಂದು ಹಸುರು ಚಿಗುರು ಕೊಟ್ಟಿದ್ದಿಲ್ಲ ಇನ್ನೊಬ್ಬರಿಗೆ ಕೊಡೋದು ಹಾಗಿರಲಿ, ತಾನೂ ಒಂದು ದಿವಸ ತಿಂದಿದ್ದಿಲ್ಲ ಬೆಳೆದಿದ್ದನ್ನೆಲ್ಲಾ ಒದ್ದೆಮೂಡಿ ಮೂರುಕಟ್ಟಿಯಲ್ಲಿ ಒಂದಕ್ಕೆ ಮೂರರ ಹಾಗೆ ಮಾರಿ, ಬಂದ ಹಣದಲ್ಲಿ ಲೇವಾದೇವಿ ಮಾಡೋ ಆಸಾಮಿ. ಇವ ಇನ್ನೊಬ್ಬರ ಮನೇಗೆ ಒಂದು ಬುಟ್ಟಿ ತರಕಾರಿ ಖುದ್ದಾಗಿ ಕೊಟ್ಟ- ಇನ್ನೂ ಜೀವಂತನಾಗಿದ್ದಾನಲ್ಲ ! ಏನೋ ದೇಶಕ್ಕೆ ಹೊತ್ತುಗಾಲ ! ಅಂದುಕೊಂಡೆ.

* * *

ರಾತ್ರಿ ಮನೇಲಿ ಊಟಕ್ಕೆ ಕುಳಿತಾಗ ನನ್ನ ಹೆಂಡತಿ ಹೇಳಿದಳು. " ತಿಮ್ಮಪ್ಪಯ್ಯನ ಕೆಂಚ ನೋಡಿದಿರಾ ಅಂದರೆ, ಏನು ಜಂಭ ಬಂದು ಬಿಟ್ಟಿದೆ " ಅಂದಳು. ' ಯಾಕೆ ? ' ಅಂತ ಮೊಸರನ್ನದ ತುತ್ತು ಬಾಯಿಗಿಟ್ಟುಕೊಂಡೆ.

ಅವರ ಮನೇಲಿ ನೋಡಿ ಕೆಂಡ ಸಂಪಿಗೆ ಅಷ್ಟು ಬಿಡುತ್ತೆ. ನಮ್ಮನೆಗೇ ಆಗಾಗ್ಗೆ ತಂದು ಕೊಡುತ್ತಿದ್ದಳು. ಇವತ್ತು ಸಾಯಂಕಾಲ ಒಂದು ಕಟ್ಟಿ ಹೂವು ತೆಗಿಸಿಕೊಂಡು ನಮ್ಮನೇ ಮುಂದೇನೇ ಹೋದಳು. ಒಳಕ್ಕೆ ಬರಲೂ ಇಲ್ಲ. ಒಂದು ಹೂವೂ ಕೊಡಲೂ ಇಲ್ಲ ಎಲ್ಲಿಗೆ ತೆಗೆದುಕೊಂಡು ಹೋಗ್ತಾಳೆ ನೋಡೋಣ ಅಂತ, ಕಸಮುಸರೆ ಮಾಡುಕ್ಕೆ ಬಂದಿದ್ದಳಲ್ಲಾ ತಿಮ್ಮಿ, ಅವಳನ್ನು ಅವಳ ಹಿಂದೇ ಕಳಿಸಿದೆ. ತಿಮ್ಮಿ ಹೇಳಿದಳು..........

ಬೇಗ ಮೊಸರನ್ನದ ತುತ್ತು ನುಂಗಿ,

" ರಸ್ತೆ ಕೊನೇ ಮನೇಗೆ ಕೊಟ್ಟು ಬಂದಳು " ಅಲ್ಲವೇ ಅಂದೆ.

" ನಿಮಗೆ ಹೇಗೆ ಗೊತ್ತಾಯ್ತು " ಅಂದಳು.

ಬೆಳಗ್ಗೆ ನಡೆದಿದ್ದೆಲ್ಲಾ ಹೇಳಿದೆ. ರಸ್ತೇಲಿರೋರೆಲ್ಲಾ ಒಂದಲ್ಲಾ ಒಂದು ಸಾಮಾನನ್ನು ಆ ಮನೇಗೆ ಕೊಟ್ಟು ಬರ್ತಾ ಇದ್ದಾರಲ್ಲಾ ಯಾರೋ ಹೊಸಬರು, ಶ್ರೀನಿವಾಸರಾಯರಂತೆ- ಅವರು ಆ ಮನೆಗೆ ಬಂದಿದ್ದಾರಂತೆ. ಎಂದು ಹೇಳಿದಳು.

' ಏನೋ ಗುಟ್ಟು ಇದೆ ಅಂದರೆ ಇದರಲ್ಲಿ ' ಎಂದಳು.

* * * *

ಮೂರು ದಿನಗಳಾಯ್ತು. ಒಂದು ದಿವಸ ನನ್ನ ಹಳೇ ಹಾಸ್ಟೆಲ್ ಜತೆಗಾರ ಶೀನಿ ನನ್ನ ಹುಡುಕಿಕೊಂಡು ನಮ್ಮನೆಗೇ ಬಂದ. ' ಏನೋ ಶೀನಿ ಎಲ್ಲಿದ್ದಿ. ನೋಡಿ ಹತ್ತು ವರ್ಷ ಆಯ್ತಲ್ಲೋ ' ಅಂದೆ. ಹಾಸ್ಟೆಲ್ ಬಿಟ್ಟಮೇಲೆ ನೀನು

ಲಾಯರ್ ಪರೀಕ್ಷೆಗೆ ಹೋದೆ. ನಿನ್ನೂರಿಗೆ ಬಂದು ಬೋರ್ಡು ತಗಲುಹಾಕಿದೆ. ನಾನು ಮುಂದೆ ಓದಲಾರದೆ ವ್ಯವಸಾಯದ ಇಲಾಖೇಲಿ ಚಾಕರೀಗೆ ಸೇರಿದೆ. ಮೊನ್ನೆ ಮೊನ್ನೆ ತನಕ ನಲ್ವತ್ತು ರೂಪಾಯಿ ಬರುತ್ತಿತ್ತು. ಆಹಾರ ಇಲಾಖೆ ಆದ ಮೇಲೆ ನನ್ನ ಅದೃಷ್ಟ ತಿರುಗಿತು. ಈಗ ನಾನು ಅಮಲ್ದಾರ್ ಗ್ರೇಡ್ ಈ ಆಹಾರದ ಇಲಾಖೇಲಿ—ಆಹಾರದ ಡಿಪೋ ಅಧಿಕಾರಿಯಾಗಿ ಈ ಊರಿಗೇ ವರ್ಗ ಮಾಡಿದ್ದರು. ಆದರೆ ಅದು ವಜಾ ಆಗಿ ಈಗ ನನ್ನನ್ನು ವ್ಯವಸಾಯದ ಇಲಾಖೇಗೇ ತಿರುಗಿ ವರ್ಗಾಯಿಸಿ ಇಲ್ಲಿಗೇ ಇನ್ಸ್ಪೆಕ್ಟರಾಗಿ ಮಾಡಿದ್ದಾರೆ. ಬಂದ ದಿವಸಾನೆ ನಿನ್ನನ್ನು ಹುಡುಕಿಕೊಂಡು ಬರೋಣ ಅಂತಿದ್ದೆ. ಆದರೆ ದಿನಾಲೂ ಬೆಳಗ್ಗೆ ಸಾಯುಂಕಾಲ ನಿಮ್ಮೂರಿನವರು ಬಂದು ಏನೇನೋ ತಂದು ಕೊಟ್ಟು ಮಾತನಾಡಿಸಿ ಹೋಗುತ್ತಿದ್ದರು. ಏನು ಸೌಜನ್ಯ ಅಂತೀ ನಿಮ್ಮೂರಿನವರಿಗೆ- ಬಲು ಒಳ್ಳೆಯವರಪ್ಪಾ. ಆದರೆ ನಿನ್ನೆಯಿಂದ ಯಾಕೋ ಯಾರೂ ಬಂದಿಲ್ಲ ಅಂದ.

ನಿಮ್ಮ ಮನೇ ಎಲ್ಲಿ. ಈ ರಸ್ತೆ ಕೊನೇ ಮನೇನೆ. ಎಂದೆ. ಹೌದು ನಿನಗೆ ಆಗಲೇ ಗೊತ್ತೆ ಎಂದ.

ಆಗ ಜ್ಞಾನೋದಯವಾಯ್ತು. "ಅಲ್ಲಾ ಶೀನಿ ನಿನಗೆ ವ್ಯವಸಾಯ ಇಲಾಖೆಗೆ ವರ್ಗ ಆಗಿದ್ದು ಊರಿನವರಿಗೆ ನಿನ್ನೆ ತಿಳಿದಿದೆ. ಅದಕ್ಕೇ ಯಾರೂ ಬಂದಿಲ್ಲ ನಿಮ್ಮನೆಗೆ. ಮೊದಲು ನೀನು ಆಹಾರದ ಡಿಪೋ ಅಧಿಕಾರಿಯಾಗಿ ಬಂದಿದ್ದೀ ಅಂತ ಅಷ್ಟು ಸೌಜನ್ಯ" ಅಂತ ವಿಶದೀಕರಿಸಿದೆ.

ನನಗೆ ಈಗ ದುಃಖ. ತಿಳಿದೋನೊಬ್ಬ ಡಿಪೋ ಅಧಿಕಾರಿಯಾಗಿ ಬಂದಿದ್ದರೆ ನಾನೂ ಬಾಳಬಹುದಾಗಿತ್ತಲ್ಲ ದೇವರು ಅದಕ್ಕೂ ಕಲ್ಲುಹಾಕಿದನಲ್ಲಾ ! ಅಂತ.

ಶಿವಣ್ಣ.

• • •

"ಗೃಹಶುಶ್ರೂಷಾ ವಿಧಾನಗಳನ್ನು ನಮ್ಮ ಮಹಿಳೆಯರು ಚೆನ್ನಾಗಿ ಬಲ್ಲವರಾದರೂ, ಇನ್ನೂ ತರಬೇತು ಹೊಂದಿದರೆ, ಅವರು ಇನ್ನೂ ಚೆನ್ನಾಗಿ ಸಂಸಾರವನ್ನು ನಿರ್ವಹಿಸಬಲ್ಲರು" (ರಾಜಾಜಿ) .......ಗಂಡಂದಿರಿಗೆ ಇದೊಂದು ಗಂಡಾಂತರ.

• • •

"ಈ ಗ್ರಂಥವನ್ನು ಪಂಡಿತರಿಗೂ ಪಾಮರರಿಗೂ ಅರ್ಥವಾಗುವ ಶೈಲಿಯಲ್ಲಿ ಬರೆದಿದೆ" (ವಿಮರ್ಶೆ) ಪಾಮರರಿಗೆ ಅರ್ಥವಾಗುವುದಾದರೆ, ಪಂಡಿತರಿಗೆ ಅರ್ಥವಾಗಲಾರದು, ಎಂಬುದೇ ನಮ್ಮ ಅನುಭವ.

# ಮೂಲೆ ಮನುಷ್ಯ

—o—

ಕರಗದ ದೊಂಬಿ ನಿಂತುಕೊಳ್ಳುವುದಕ್ಕೆ ಯಾರದ್ದಾದರೂ ತಲೆ ಸಿಗವು ದೆಂಬ ಭರವಸೆಯಿಂದ ನಾನು ಟಿಕೀಟ್ ತೆಗೆದುಕೊಂಡೆ. ರೈಲೂ ಬಂತು, ಬೆಂಗಳೂರಿಂದ. ನಮ್ಮೂರಲ್ಲಿ ಹೆಚ್ಚು ಜನ ಇಳಿಯಲಿಲ್ಲ. ನನ್ನೆದುರು ಸರಿಯಾಗಿ ಬಂದು ನಿಂತ ಒಂದು ಡಬ್ಬಿಯೊಳಕ್ಕೆ ಹಾರಿದೆ. ನನ್ನನ್ನು ಬೀಳ್ಕೊಡಲು ನನ್ನ ಮಾವನವರೇ ಸ್ಟೇಷನಿಗೆ ಬಂದಿದ್ದರು. ಆದ್ದರಿಂದ, ನನ್ನ ಗಾಡಿಯೊಳಕ್ಕೆ ಅವರು ಒಂದು ಗೂಡೆ ಕೋಡುಬಳೆಯನ್ನು ಒಂದು ಗೂಡೆ ಕಿತ್ತಲೆ ಹಣ್ಣನ್ನೂ ಇರಿಸಿದರು. ನನ್ನ ಆನಂದಕ್ಕೆ ಪಾರವೇ ಇರಲಿಲ್ಲ. ಸಾಲದ್ದಕ್ಕೆ ನಾನು ಹತ್ತಿದ ಡಬ್ಬಿಯಲ್ಲಿ—ಒಬ್ಬನೇ ಒಬ್ಬ ಇಸಮು! ಉಳಿದೆಲ್ಲ ಜಾಗವೂ ಖಾಲಿ! ಕೂರುವುದಕ್ಕೆ ಜಾಗ, ಮಲಗುವುದಕ್ಕೆ ಜಾಗ, ಉರುಳು ಸೇವೆಗೂ ಜಾಗ. ತಾಂಡವನೃತ್ಯ ಅಭ್ಯಾಸ ಮಾಡುವುದಕ್ಕೂ ಜಾಗ.... ಕರಗದ ಮಾರನೆಯ ದಿನ, ಮೈಸೂರುಕಡೆ ಗಾಡೀಲೀ, ಅಂದರೆ, ನನ್ನ ನಶೀಬನ್ನು ನೀವೇ ಕೊಂಡಾಡುವಿರಿ

ಗಾಡಿ ಹೊರಟಿತು ಸಹಪ್ರಯಾಣಿಯನ್ನು ಗಮನಿಸಿದೆ. ಛಳಿಯಿಂದ ನಡುಗುತ್ತಿದ್ದ ಹಾಗೆ ತೋರಿತು ಮುಸುಕು ಹಾಕಿಕೊಂಡು ಮೂಲೆಯಲ್ಲಿ ಮುದುರಿದ್ದ, ಮುಖ ತೋರಿಸುವುದಕ್ಕೂ ನಾಚಿಕೆ ...ಮನುಷ್ಯನಿಗೆ!....ಅವನಕಡೆ ತಿರುಗಿ ನಗುನಗುತ್ತಾ, "ಸ್ಥಳ ವಿಶಾಲವಾಗಿದೆ, ಅಲ್ಲವೆ? ಕಿಟಕಿ ತೆಗೆಯಿರಿ!" ಎಂದೆ. "ಥೂ" ಎಂಬ ಉತ್ತರ ಬಂತು. ಹೊಗೆ ಕಡ್ಡಿ ಒಂದನ್ನು ನೀಡಿ, "ಸೇದುತ್ತೀರೇನು?" ಎಂದೆ. "ಥತ್" ಎಂದ ಅದಕ್ಕೆ ಬದಲಾಗಿ ... "ಏಕೆ? ಕರಗ ಚೆನ್ನಾಗಿರಲಿಲ್ಲವೇನು? ಮಳೆ ಬಿತ್ತೇನು?" ಮತ್ತೆ ಅದೇ ಅಸಹ್ಯಕರವಾದ ಶಬ್ದ! "ಮಾತನಾಡಿ, ಸ್ವಾಮಿ! ಏಕೆ ದುಡ್ಡು ಗಿಡ್ಡು ಕಳೆದುಕೊಂಡ್ರೇನು ಬೆಂಗಳೂರಲ್ಲಿ?" ಈ ಪ್ರಶ್ನೆಗೆ 'ಹೂಂ' ಅಂದ, ಅವನ್ನೇ ಅನುಸರಿಸಿ, "ಎಷ್ಟು?" ಎಂದೆ "ಇದ್ದದ್ದೆಲ್ಲ" ಎಂದ, "ಅಷ್ಟೇತಾನೆ" ಅಂದೆ "ಹೆಂಡತೀನೂ ಎಲ್ಲೋ ತಪ್ಪಿಸಿಕೊಂಡು ಹೊರಟು ಹೋದಳು" ಎಂದ, ಪಾಪಿ, ಮಕ್ಕಳು" "ಎರಡು, ಅವೂನೂ ಅವಳ ಜೊತೆಯಲ್ಲೇ ಪರಾರಿ" "ಒಡವೆ?" "ಅದು ಬೇರೆ, ಅವಳ ಸಂಗಡಲೇ ...ಸಾವಿರ ರೂಪಾಯಿನದು...... ನಾನು ಮಾಡಿಸಿ ಹಾಕಿದ್ದು"....ನನಗೆ ಅಯ್ಯೋ ಎನಿಸಿತು. ನನ್ನ ಸಂತೋಷದ ಸವಿ, ಆತನ ಸಂಸಾರದ ಕಹಿ, ಎರಡನ್ನೂ ತೂಕಮಾಡಿದಾಗ. ಶೋಕ ಇಮ್ಮಡಿಸಿತು. "ನಮ್ಮ ಮಾವ...!" ಎಂದೆ. ಕೇಸು ಹಾಕುತ್ತಾರಂತೆ ನನ್ನ

ಮೇಲೆ, ಬೇಹುಷಾರಿ ಗಂಡ ಅಂತ" ಎಂದ....ಆಗ ನನ್ನ ಬಾಯಿಂದ ಒಂದು ಮಾತು ಹೊರಟಿತು. ಹೊರಡಬಾರದಾಗಿತ್ತು, ಒಪ್ಪಿದೆ ಆದರೆ, ಅಷ್ಟು ತಾಳ್ಮೆ ಯಾರಿಗೆ ಬರುತ್ತದೆ ?....ನಾನೆಂದೆ: "ಛೆ! ಇಷ್ಟು ತಾಪತ್ರಯ ನನ್ನ ಮೇಲೆ ವಕ್ರಿಸಿಬಿಟ್ಟಿದ್ದರೆ, ನಾನು ಸುಖವಾಗಿ ಕತ್ತು ಕುಯ್ದುಕೊಂಡುಬಿಡ್ತಿದ್ದೆ''.

ಅದಕ್ಕೆ ಆ ಪ್ರಾಣಿ ಏನು ಉತ್ತರ ಹೇಳಿದ, ಗೊತ್ತೆ ?.... "ಹಿಂದಿನ ಸ್ಟೇಷನ್ನಲ್ಲಿ ರೈಲು ನಿಂತಿದ್ದಾಗ, ನಾನೂ ಆ ಕೆಲಸವನ್ನು ಮಾಡಿಕೊಂಡುಬಿಟ್ಟೆ" ಎಂದ.

ಮತ್ತೆ, ಅವನನ್ನು ನಾನು ಮಾತನಾಡಿಸಲಿಲ್ಲ; ಆ ಕಡೆ ತಿರುಗಲೇ ಇಲ್ಲ. ಮುಂದಿನ ನಿಲ್ದಾಣದಲ್ಲಿ ಆ ಡಬ್ಬಿಯಿಂದ ಇಳಿದು ಓಡಿದೆ.

ಗಂಗಾಧರ.



"ಶಿಸ್ತು'' ಭಾಷಣವನ್ನು ಸಿದ್ಧಗೊಳಿಸುತ್ತಿದ್ದೇನೆ—ಅಷ್ಟೆ.

# ಬಂಜರು ಬುರುಡೆ

———o———

ಬಟ್ಟತಲೆಯ ಮೇಲೆ ಬಂಗಲೆ ಕಟ್ಟಲು ಸಾಧ್ಯವೆ? ಆದರೂ, ಅದನ್ನೇ ಅಸ್ತಿಭಾರವಾಗಿ ಉಪಯೋಗಿಸಿಕೊಂಡು ಲಕ್ಷಾಂತರ ಜನರು ಮಹಲ್ಲುಗಳನ್ನೇರಿಸಿದಾರೆ. ಲಕ್ಷ್ಮಿಯ ಲೀಲಾನಟನಕ್ಕೆ ಬಟ್ಟತಲೆಯಷ್ಟು ರಮಣೀಯವಾದ ನೃತ್ಯರಂಗ ಬೇರೊಂದಿಲ್ಲ. ಅನುಮಾನವಿದ್ದರೆ, ತೈಲವ್ಯಾಪಾರಿಗಳನ್ನು ಕೇಳಿ. ಬಂಜರು ಬುರುಡೆಯ ಮೇಲೆ ಕೂದಲು ಚಿಗುರಿಸುವುದಕ್ಕಾಗಿ ತಲೆ ಇದ್ದವರೆಲ್ಲ ತೈಲ ತಯಾರು ಮಾಡಿದಾರೆ. ಅದರ ಮೇಲೆ ಸೊಪ್ಪು ಹಿಂಡಿದಾರೆ; ಸೋಪು ಹಚ್ಚಿದಾರೆ; ಮೆಣಸು ಅರೆದಿದಾರೆ. ಹುಲಿಯ ಕೊಬ್ಬು, ತಿಮಿಂಗಲದ ಹುಬ್ಬು, ಆನೆಯ ಬಾಲ, ಆಕಾಶದ ಬೇರು, ಇವೆಲ್ಲವನ್ನೂ ಸಾಮಗ್ರಿಗಳಾಗಿ ಉಪಯೋಗಿಸಿ, ಬಟ್ಟತಲೆಯವರನ್ನು ಸುಲಿದು ಬಟ್ಟ ಬಯಲಿಗೆ ಎಳೆದು ನಿಲ್ಲಿಸಿದಾರೆ.

ಬಟ್ಟತಲೆಯು ಪುರುಷರನ್ನು ಮಾತ್ರ ಬಾಧಿಸುವ ಅನಾಹುತ. ಮಹಿಳೆಯರನ್ನು ಹಿಂಸಿಸಲು ಅದು ಹಿಂಜರಿಯುತ್ತದೆ. ಆದ್ದರಿಂದ ಅದನ್ನು ಒಂದು ಬಗೆಯ ಸಭ್ಯ ಸೋಂಕು ಎಂದು ಹೇಳಬಹುದು. ನಲವತ್ತು ವಯಸ್ಸಿನ ಸುಮಾರಿಗೆ ಚಾಳೀಸ್ ಬರುವಂತೆ, ಜೊಳ್ಳುಹೊಟ್ಟೆ ಹಲ್‌ಬಿದಾಯಾ ಇತ್ಯಾದಿಯಂತೆ, ಎಲ್ಲರಿಗೂ ಈ ಬಟ್ಟತನವೂ ಪ್ರಾಪ್ತವಾಗುವುದಾದರೆ, ತೈಲ ಮುಲಾಮು ಮೆಣಸುಗಳ ತಂಟೆಗೆ ಒಬ್ಬರೂ ಹೋಗುತ್ತಿರಲಿಲ್ಲ. ಆದರೆ, ಕೆಲವರಿಗೆ ಅರವತ್ತಾದರೂ ಮುಂಗುರುಳು, ಕೆಲವರಿಗೆ ಮೂವತ್ತಕ್ಕೇನೆ ಮಂಡೆ ಬೋಳು—ಎನ್ನುವಾಗ, 'ಉದರವೇನೋ ನೊಂದು ಬಾಯಲೇನೋ ಬಂದು, ಕಣ್ಣು ಕೆಂಪಾದುದಾಗ' ಅಂತ ಕವಿ ಹೇಳಿದ ಹಾಗೆ, ನಮಗೂ ಆಗುತ್ತೆ. ಜಾಹಿರಾತುಗಳನ್ನು ಪಠಿಸಿ ಜಾಣತನವನ್ನು ಮರೆತು ತೈಲದವರಿಗೆಲ್ಲ ಧೈಲಿ ಹಣ ಕೊಟ್ಟು ಮಹಡಿ ಮನೆ ಕಟ್ಟಿಸಲು ಸಹಾಯ ಮಾಡೋಣವೆನಿಸುತ್ತದೆ. ಕರ್ಮಫಲವನ್ನು ಕರುಕಿಸಲು ಮುಲಾಮುಂಟೆ? ದೈವದ ಶಾಪಾಗ್ನಿಯನ್ನು ಶಮನ ಮಾಡಲು ಘೃತ ಒದಗುತ್ತದೆಯೆ?

ಬಟ್ಟತಲೆಯೊಳಗೆ ಹೆಚ್ಚು ಮಿದುಳಿದೆ ಎಂದು ಪ್ರೊ॰ ಫ್ಲುಯರ್ ಹೇಳುತ್ತಾರೆ. ಆದರೆ, ಆತನಿಗೇ ಅಂಥ ಬುರುಡೆ ಇರುವಾಗ, ಅವರ ಮಾತನ್ನು ಯಾರು ನಂಬುತ್ತಾರೆ? ಬಟ್ಟ ತಲೆಯವರಿಗೆ ಕಲ್ಲು ತಗುಲಬಹುದು, ಆದರೆ, ಕ್ಷಯರೋಗ ತಗಲುವುದಿಲ್ಲವೆಂದು ಹಲವು ವೈದ್ಯರು ಭರವಸೆ ಕೊಡುತ್ತಾರೆ. ಜಾತಕದಲ್ಲಿ ಕ್ಷಯರೋಗವಿದ್ದರೆ, ಅದು ಕೇಶಕ್ಷಯದಲ್ಲೇ ಪರ್ಯವಸಾನ; ಶಾಸಕ್ಷಯಕ್ಕೆ

ಅವಕಾಶವಿಲ್ಲ. ಬಟ್ಟತಲೆಯವರು ಸಾಮಾನ್ಯವಾಗಿ ಖೂನಿ ದರೋಡೆ ಇತ್ಯಾದಿಗಳನ್ನು ಮಾಡುವುದು ಅಸಂಭವವಂತೆ; ಕಾರಾಗೃಹಸ್ಥರು ಹೇಳುತ್ತಾರೆ ಆದ್ದರಿಂದ ಅಮೇರಿಕಾದಲ್ಲಿ ಗಂಡುಬೀರಿಗಳು ಅಂಥವರನ್ನೇ ಪತಿದೇವರನ್ನಾಗಿ ಆರಿಸುತ್ತಿರುವರಂತೆ; ಬ್ಯಾಂಕ್ ಮ್ಯಾನೇಜರುಗಳು ಅಂಥವರನ್ನೆ ಗುಮಾಸ್ತೆಯರನ್ನಾಗಿ ನಿಯಮಿಸುವರಂತೆ; ಬಟ್ಟೆ ತಲೆಯಮೇಲೆ ಜಾಹಿರಾತುಗಳನ್ನಂಟಿಸಿಕೊಂಡು ನಾಟಕ ಮಂದಿರಗಳಲ್ಲಿ ಮುಂದಿನ ಸಾಲಿನಲ್ಲಿ ಕೂತು ಕಾಸು ಸಂಪಾದಿಸುವ ಸಾಹಸಿಗಳೂ, ಪಾಶ್ಚಾತ್ಯ ದೇಶಗಳಲ್ಲುಂಟು. ಆದರೆ, ಒಂದೇ ಒಂದು ಜಾಹಿರಾತು, ಅವರ ತಲೆಗೆ ತೀರ ಅಪ್ರಕೃತ........ ಅದು ಯಾವದೆಂಬುದನ್ನು "ವಾಚಕ ಮಹಾಶಯರು" ಆಗಲೇ ಊಹಿಸಿರುವುದರಿಂದ, ನಾನು ಹೇಳುವುದು ಅಪ್ರಕೃತ.

ರೇವಣ್ಣ




ಈಗ ಕೊಡೋ ರೇಷನ್ನಿನಲ್ಲಿ "ಸುಸ್ತಾಗಿರೋದೇ" ಆರೋಗ್ಯ ಕಣ್ರೀ
—ಚೆನ್ನಾಗಿ ಪರೀಕ್ಷೆ ಮಾಡಿದೇನೆ ಎಲ್ಲೂ ಏನೂ ಖಾಯಿಲೆ ಇಲ್ಲ.

 

# ಇಲಾಖಾನುಕೂಲ



ರೈಲ್ವೆ ಕೆಲಸಗಾರರಿಗೂ ನೌಕರಿದಾರರಿಗೂ ಆ ಸಾರ್ವಜನಿಕ ವಾಹನದಲ್ಲಿ ಉಚಿತ ಪ್ರಯಾಣದ ಅನುಕೂಲ ಇದೆ. ಬಸ್‌ಗಳಲ್ಲಿ ಬಹುಭಾಗ ಕಂಪನಿ ಸಿಬ್ಬಂದಿಯ ಸಂಬಂಧೀಕರು ಬಿಟ್ಟಿ ಪ್ರಯಾಣ ಮಾಡುವುದನ್ನು ನಾವು ನೋಡಬಹುದು. ಅಂದಮೇಲೆ ಆಯಾ ಇಲಾಖೆಯವರು ಅದರದರ ಅನುಕೂಲಗಳನ್ನು ಪಡೆಯಲು ಯಾವ ಅಡ್ಡಿಯೂ ಇರಕೂಡದೆಂಬುದು ಸ್ವತಃ ಸಿದ್ಧ. ಉದಾ: ವಿದ್ಯುಚ್ಛಕ್ತಿ ಇಲಾಖೆಯ ಅಧಿಕಾರಿಗಳೂ ಇತರರೂ ಸೌದೆ ಕೊಳ್ಳುವುದೆಂದರೆ, ಆ ಶಕ್ತಿಗೇ ಅವಮಾನ. ಹಾಗೆಯೇ, ಉಪಾಧ್ಯಾಯರ ಮಕ್ಕಳನ್ನೂ ಶಾಲೆಗೆ ಸೇರಿಸಿ ಓದುವಂತೆ ಬಲವಂತ ಪಡಿಸುವುದು ತೀರ ಅನ್ಯಾಯ. ಲೆಕ್ಕದ ಮೇಷ್ಟರ ಮಗನೂ ಮಗ್ಗಿ ಕಲಿಯಬೇಕೆ? ಹಾಡಿನ ಮೇಷ್ಟರ ಮಗಳನ್ನೂ ಹಾಡುವಂತೆ ಕಾಡಬಹುದೆ? ಮಲೇರಿಯಾ ಆಫಿಸರ್ ಮನೆಯವರಿಗೆ ಕ್ವಿನೀನು ಧಾರಾಳವಾಗಿ ಒದಗಿಸುವುದರಲ್ಲಿ ತಪ್ಪೇನು? ಸ್ಟೇಷನರಿ ಇಲಾಖೆಯವರೂ ಅವರ ಬಂಧು ಬಳಗದವರೂ ಇತರರಂತೆ ಕಡ್ಡಿ ಶಾಯಿ ಅಂತ ಕಂಗೆಡಬಹುದೆ? ರೆವೆನ್ಯೂ ಇಲಾಖೆಯವರಿಗೆ ಕಂದಾಯ ಮಾಫಿ ಮಾಡಲೇಬೇಕು. ಫುಡ್ ಇಲಾಖೆಯವರಿಗೆ ಕೂಪನ್ ರದ್ದು, ಅರಣ್ಯ ಇಲಾಖೆಯವರಿಗೆ ಗಂಧದ ಕೊರಡೂ ಬೊಂಬು ಉಚಿತ, ಎಕ್ಸೈಜಿನವರಿಗೆ ಪಾನ ನಿರೋಧವೆಂದರೇನು? ಸರ್ವೇಜನಾನೂ ಸುಖಿನೋ ಭವಂತು. ಚಿನ್ನದ ಗಣಿಯವನಿಗೆ ಯತ್‌ಕಿಂಚಿತ್ ಹಿರಣ್ಯಂ; ಜಿಯಾಲಜಿ ಇಲಾಖೆಯವರಿಗೆ ಒಂದಿಷ್ಟು ಕಾಗೆ ಬಂಗಾರ, ಇಂಜನೀಯರಿಂಗ್‌ನವರಿಗೆ ಒಳ್ಳೇ ಚಪ್ಪಡಿ, ಪಬ್ಲಿಕ್ ಸರ್ವಿಸ್ ಕಮಿಷನ್ನಿನವರ ನಂಟರಿಗೆ ಚಾಕರಿ, ಯಾಕೆ ಒದಗಿಸಬಾರದು. ಅವರವರ ಇಲಾಖೆ ಅನುಕೂಲಗಳನ್ನು ಅವರೆಲ್ಲ ಕಾಸು ತೆತ್ತೇ ಪಡೆಯಬೇಕೆ? ಪೋಸ್ಟ್ ಮೇಸ್ಟರ ಅಳಿಯನೂ ಸ್ಟಾಂಪ್ ನೆಕ್ಕಬೇಕೆ? ಸ್ಯಾನಿಟರಿ ಇನ್ಸ್‌ಪೆಕ್ಟರ ಹೆಂಡತಿ ಪೊರಕೆ ಹಿಡಿಯಬಹುದೆ? ಎಂಜಿನ್ ಡ್ರೈವರಿಗೆ ಅಭ್ಯಂಜನಕ್ಕೆ ಬಿಸಿನೀರಿಗೆ ಬರಗಾಲವೆ?....ಕೊಡೋಣ....ತೆಗೆದುಕೊಳ್ಳಲಿ ಖಜಾನೆ ನೌಕರರಿಗೆಲ್ಲ ಮಜಾನೆ! ಪೋಲೀಸ್ ಇಲಾಖೆಯವರಿಗೂ ಕೂಡ ಮಧ್ಯಏಷ್ಯಾದ ಒಂದು ಸರ್ಕಾರ ವಿಚಿತ್ರ ರೀತಿಯ ಒಂದು ರಿಯಾಯತಿಯನ್ನು ಕೊಟ್ಟಿದೆ ಮಹಾಜನರಿಂದ ಯಾವ ಪೋಲೀಸಿನವನು ಏನು ಕದ್ದರೂ, ಅದು ಅವನ ಸ್ವತ್ತು! ಅದು ಕಳ್ಳತನವೆಂದೆನಿಸುವುದೇ ಇಲ್ಲ. ಕಳೆದುಕೊಂಡವನನ್ನು ಕೋರ್ಟಿಗೆ ಕರೆದು, 'ನಾನು ಇದನ್ನು ಮನಸಾರ ಕೊಟ್ಟಿದೇನೆ....ನಮಮ ನಮಮ' ಎಂದು ಬರೆಸಿಕೊಳ್ಳುತ್ತಾರೆ.

———o———

## —★ || ಡಾ|| ದಾಮೋದರಂ || ★—

—o—

ನಾಲ್ಕು ವರ್ಷಗಳ ಹಿಂದೆ, ಅವರಿಗೆ ಇಂಥ ಹೆಸರಿರಲಿಲ್ಲ ಆದರೆ, ಅಮೇರಿಕಾ ಖಂಡಕ್ಕೆ ಉಚ್ಚಶಿಕ್ಷಣಕ್ಕಾಗಿ ಪ್ರಯಾಣ ಬೆಳೆಸಿ, ಅಲ್ಲಿ ಇಳಿದು, ಆರು ತಿಂಗಳಾಗುತ್ತಲೂ, ಆತನ ನಾಮವೇ ಹೊಸರೂಪ ತಾಳಿತು ; ತವರ್ಗದಿಂದ ಟವರ್ಗಕ್ಕೆ ಏರಿತು. ಎರಡು ವರ್ಷಗಳಾಗುತ್ತಲೂ, ಚೂಡಾಮಣಿಯಂತೆ, ಅವರ ಹೆಸರಿನ ತಲೆಗೆ ಡಾ|| ಎಂಬ ಅಲಂಕಾರ ಸೇರಿಕೊಂಡಿತು. ಅದಕ್ಕಾಗಿಯೇ ಅವರು ಸಮುದ್ರವನ್ನು ದಾಟಿದ್ದು. ರಸಾಯನ ಶಾಸ್ತ್ರದ ಗುಳಿಗೆಗಳನ್ನು ನಮ್ಮ ದೇಶದ ನವಯುವಕರಿಗೂ ನವೀನ ಯುವತಿಯರಿಗೂ ಕುಳಿತಕಡೆಯಲ್ಲೇ ಹಂಚುವ ಅಧಿಕಾರವನ್ನು ಅವರು ಆ ಡಾ|| ಬಿರುದಿನ ಜೊತೆಯಲ್ಲೇ ಪಡೆದರು. ಅಮೇರಿಕಾದ ಅನಾಗರೀಕರಂತೆ, ಅವರೂ ಕೂಡ ಮಾತು ಮಾತಿಗೂ ಡ್ಯಾಂ ಡ್ಯಾಂ ಎಂಬ ಒಗ್ಗರಣೆಯನ್ನು ಹಾಕುವುದು ರೂಢಿ. ಆದ್ದರಿಂದ, ಅವರ ಹೊಟ್ಟೆತುಂಬ ಡ್ಯಾಂಗಳೇ, ಎಂದು ಅವರ ವಿದ್ಯಾರ್ಥಿಗಳು ಅವರ ಹೆಸರನ್ನೆತ್ತಿ ಹಾಸ್ಯಮಾಡುವುದುಂಟು. ಆದರೆ, ಆ ಮಾತು ನಮಗೇಕೆ ? ನಾವು ಸಭ್ಯರಾಗಿಯೇ ಇರೋಣ ಹತ್ತಾರು ರೂಪಾಯಿ ಖರ್ಚುಮಾಡಿ, ಅವರು ಅಮೇರಿಕಾಗೆ ಹೋಗಿ, ಅಲ್ಲಿ ಕಲಿತದ್ದು ಅದೊಂದೇ ದುರಭ್ಯಾಸ ಇದರಿಂದಲೇ ಗೊತ್ತಾಗುತ್ತದೆ, ಅವರಲ್ಲಿ ಜಾಣತನ ಕೊಂಚ ಕಡಿಮೆ, ಎಂಬುದು.

ಅಲ್ಲಿಯ ಶೀತಲವಾದ ಹವದಿಂದ ಅವರ ಮುಖ ಅಂಗೈ ಮುಂಗೈ ಇಷ್ಟು, ಮಾತ್ರ ಶ್ವೇತವರ್ಣಕ್ಕೆ ತಿರುಗಿಬಿಟ್ಟಿತು. ಬಂದು ಎರಡು ವರ್ಷಗಳಾದರೂ ಇನ್ನೂ ಬೂದಿಬಣ್ಣವಾಗಿಯೇ ಉಳಿದಿವೆ ಆದ್ದರಿಂದ, ಅವರನ್ನು ಅಂಗಿ ಬಿಚ್ಚಿಸಿ ಪಕ್ಕದಲ್ಲಿ ಊಟಕ್ಕೆ ಕೂರಿಸಿಕೊಳ್ಳುವುದು ಅಸಹ್ಯವೇ ಸರಿ. ಡಾ|| ರೂ ಕೂಡ ಅಂಥ ಸನ್ನಿವೇಶಗಳಲ್ಲಿ, ಸಬೂಬು ಹೇಳದೆಯೆ ಮುಖ ಮರೆಸಿಕೊಳ್ಳುತ್ತಿದಾರೆ. ಅವರಾಯಿತು, ಅವರ ಸಂಶೋಧನಾಲಯವಾಯಿತು, ಸದಾ ಅಲ್ಲೇ ಸಮಾಧಿ ಅವರಿಗೆ. ನಂಟರೊಬ್ಬರೂ ಇಲ್ಲ, ಇದ್ದರೂ, ಹೇಳಿಕೊಳ್ಳುವ ಸ್ಥಿತಿಯಲ್ಲಿಲ್ಲ ಅವರು.

ಅಮೇರಿಕಾ ಎಂಬುದು ಶುದ್ಧ ತಲೆಕೆಳಗಿನ ಊರು, ಇಲ್ಲಿ ಹಗಲೆಂದರೆ, ಅಲ್ಲಿ ರಾತ್ರಿ; ನಾವು ಗೊರಕೆ ಹೊಡೆಯುವಾಗ ಅಲ್ಲಿ ಅವರು ಹೊರಕ್ಕೆ ಹೊರಡುವರು. ವಿಚಿತ್ರ ದೇಶ. ಇಲ್ಲಿ ನಾವು ಪರಸ್ಪರ ಕೈ ಮುಗಿಯುತ್ತೇವೆ ; ಅಲ್ಲಿ ಒಬ್ಬ ಮತ್ತೊಬ್ಬನನ್ನು ಕಂಡರೆ ಸರಿ, ನಾಚಿಕೆ ಭಯ ಏನೂ ಇಲ್ಲದೆ, ಕೈ ಕೊಟ್ಟು ಬಿಡುತ್ತಾನೆ. ಮನೆ ಮಠ ಅಂದರೆ ಇಲ್ಲಿ ನಾವು ಕಾಲಿನದು ಕಳಚುತ್ತೇವೆ; ಅಲ್ಲಿ ತಲೆಯನ್ನು ತೆಗೆದು ಕೈಯಲ್ಲಿ ಹಿಡಿಯುತ್ತಾರೆ; ವಿಚಿತ್ರ ಜನ ! ಇಲ್ಲಿ ನಾವು 'ಗಂಜಿ

ಬಿತ್ತಿ?' ಅಂತ ಕುಶಲ ಪ್ರಶ್ನೆ ಮಾಡುತ್ತೇವೆ. ಅಲ್ಲಿ ಹಾಗಲ್ಲ; ಮಂಜು ಬಿತ್ತಿ?' ಅಂತ ವಿಚಾರಿಸುತ್ತಾರೆ, ಮಟ ಮಟ ಮಧ್ಯಾಹ್ನದಲ್ಲೂ!........ಇಲ್ಲಿ ಕಪ್ಪಗಿದ್ದರೆ, ಕೃಷ್ಣಾ ಅಂತ ಗುಡಿಕಟ್ಟಿ ಪೂಜಿಸುತ್ತೇವೆ; ಅಲ್ಲಿ ಕಪ್ಪಗಿದ್ದರೆ, ನೀಗ್ರೋ ಅಂತ ಬೈದು ಗುಡಿಸಲಿಗೆ ಬೆಂಕಿ ಹಚ್ಚುತ್ತಾರೆ....ಡಾ|| ಗೆ ಅಲ್ಲಿ ತುಂಬ ತಾಪತ್ರಯವಾಯಿತಂತೆ. ಅಲ್ಲಿ ಅವರಿಗೆ ಹಗಲೆಲ್ಲ ನಿದ್ದೆ; ರಾತ್ರಿಯೆಲ್ಲ ಎಚ್ಚರ. ಹಗಲು ಕುರುಡು; ರಾತ್ರಿ ಬೆಳಕು. ಹಗಲು ಕನಸು; ರಾತ್ರಿ ಮುನಿಸು! ಅವರಿಗೋಸ್ಕರ ಅಲ್ಲಿಯ ಪಾಠ ಪ್ರವಚನ ಪರೀಕ್ಷೆ ಎಲ್ಲವನ್ನೂ ನಟನಟ ನಡುರಾತ್ರಿಯಲ್ಲೇ ನಡೆಸಬೇಕೆಂದು ಅವರು ಅಧ್ಯಕ್ಷರಿಗೆ ಕಾಗದ ಬರೆದರಂತೆ ಆದರೆ, ಆ ಕಾಗದವನ್ನೂ ಅವರು ಇಲ್ಲಿಯ ಹಗಲಿನಲ್ಲಿ ಬರೆದದ್ದರಿಂದ ಯಾರಿಂದಲೂ ಓದಲು ಸಾಧ್ಯವಾಗಲಿಲ್ಲವಂತೆ.

ಅಮೇರಿಕಾ ಅಂದರೆ ಜಾದೂ ಖಂಡ. ಅಲ್ಲಿ ಸರಾಸರಿ ನಾಲ್ಕು ಜನರಿಗೊಂದು ಫೋರ್ಡ್ ಫ್ಲೋರ್ ಸೀಟರಿದೆಯಂತೆ. ಆದ್ದರಿಂದ, ಅಲ್ಲಿ ಯಾರೂ ನಡೆಯುವಂತೆಯೇ ಇಲ್ಲ. ಗುಂಡಿ ಅದುಮಿದರೆ ಅಲ್ಲಿ ಸ್ನಾನ ಸಂಪೂರ್ಣ. ಅಡಿಗೆ ಉಡಿಗೆ ಎಲ್ಲಕ್ಕೂ ಎಲೆಕ್ಟ್ರಿಕ್ ಯಂತ್ರಗಳ ರಾಶಿ. ಕಸ ಗುಡಿಸುವುದಕ್ಕೊಂದು, ರಸ ಕುಡಿಸುವುದಕ್ಕೊಂದು, ದನ ಮೇಯಿಸುವುದಕ್ಕೊಂದು, ಧನ ಕೂಡಿಸುವುದಕ್ಕೊಂದು, ಕವನ ಬರೆಯುವುದಕ್ಕೊಂದು, ಹವನ ಏರಿಸುವುದಕ್ಕೊಂದು, ಕೆಮ್ಮಲು ಯಂತ್ರ, ಬೊಮ್ಮಲು ಯಂತ್ರ—ಉತ್ತು ಬಿತ್ತಿ ಕಳೆ ಕಿತ್ತು ಬೆಳೆ ಎತ್ತಿ ಕೊಯ್ದು ತುಳಿದು ಕೇರಿ ಕುಟ್ಟಿ ಬೇಯಿಸಿ ಜೀರ್ಣಿಸಲು ತರತರದ ಯಂತ್ರಗಳು! ಹಬ್ಬದ ಒಬ್ಬಟ್ಟುಗಳೆಲ್ಲ ಡಬ್ಬಗಳಲ್ಲಿ ಸಿದ್ಧ! ಕಳ್ಳ ತೆಗೆಯುವುದಕ್ಕೆ, ಕಳ್ಳನನ್ನು ಹಿಡಿಯುವುದಕ್ಕೆ, ಮಗ್ಗಿ ಕಲಿಸುವುದಕ್ಕೆ, ಸುಗ್ಗಿ ಕುಣಿಸುವುದಕ್ಕೆ, ನಾಯಿ ಸಾಕುವುದಕ್ಕೆ, ಕಾಯಿ ಒಡೆಯುವುದಕ್ಕೆ—ಎಲ್ಲಕ್ಕೂ ಯಂತ್ರಗಳು! ಅವನ್ನೆಲ್ಲ ನೋಡಿ, ಡಾ|| ಬೆಚ್ಚಬೆರಗಾದರು; ಅಚ್ಚ ಮಗುವಾದರು.

ಭರತ ಖಂಡವನ್ನೂ ಅಂಥ ಜಾದೂ ಖಂಡ ಮಾಡಬೇಕೆಂಬುದೇ ಡಾ|| ರ ದೃಢಸಂಕಲ್ಪ. ಬೆಂಕಿಕಡ್ಡಿಗೆ ಬದಲಾಗಿ ಬೆಂಕಿಯನ್ನೇ ಕಡ್ಡಿಮಾಡಿ ಪೆಟ್ಟಿಗೆಗಳಲ್ಲಿರಿಸಿ ಮಾರಬೇಕು, ಹಾಡಿದ್ದನ್ನೇ ಹಾಡುವ ಕಿಸಿಬಾಯಿ ಗ್ರಾಮಫೋನುಗಳಿಗೆ ಬದಲು ಹಾಡಿದ್ದನೆಲ್ಲ ನುಂಗಿ ಮೌನವಾಗಿರುವ ನಗರಫೋನುಗಳನ್ನು ತಯಾರಿಸಬೇಕು; ಗುಂಡಿ ಅದುಮಿದರೆ ಗುಂಡಿಗೆ ಬಲ ಇಮ್ಮಡಿಸಬೇಕು; ಹೊಗೆಯಿಲ್ಲದ ಸಿಗರೇಟು, ಮಿಗವಿಲ್ಲದ ಸಾರೋಟು, ಹಗೆ ಇಲ್ಲದ ನಗೆ, ಲಂಗ್ ಇಲ್ಲದ ಕುದುರೆ, ಕಣ್ಣೇ ಇಲ್ಲದ ಕನ್ನಡಕ, ಇತ್ಯಾದಿ ಚಮಚಮತ್ಕಾರದ ಪದಾರ್ಥಗಳನ್ನು ತಯಾರಿಸಿ ಭಾರತಮಾತೆಯ ಬೊಕ್ಕಸವನ್ನು ತುಂಬಬೇಕೆಂದು ಡಾ|| ರು ನಿಶ್ಚಯಿಸಿದರು. ರಾಮುನನ್ನೂ ರಾಮಾನುಜನನ್ನೂ ಕೃಷ್ಣನನ್ನೂ ಕೃಷ್ಣಾನುಜನನ್ನೂ ಮಾರಿಸಬೇಕೆಂದು ಮನಸ್ಸಿನಲ್ಲೇ ಕನಸು ಕಂಡರು. ಠಿ ಲೋಕದಲ್ಲಿ ತಾನೂ ಪ್ರಖ್ಯಾತನಾಗಬೇಕೆಂದು ಸಂಕಲ್ಪಿಸಿದರು.

ಅಮೇರಿಕಾದಲ್ಲಿದ್ದಾಗಲೇ, ಡಾ|| ಗೆ ಚಿಂತೆ ಪ್ರಾರಂಭವಾಯಿತು. ಡಾಕ್ಟರ್ ಪಟ್ಟ ದೊರೆಯುತ್ತಲೂ, ಶಿರೋಭಾರ ಇಮ್ಮಡಿಸಿತು. ತಲೆಯ ಮೇಲಿನ ಕೂದಲೆಲ್ಲ ಉದರಿತು. ವಿಚಾರಗಳೂ ಬುರುಡೆಯೂ ಥಳ ಥಳನೆ ಹೊಳೆಯಲು ತೊಡಗಿದುವು. ವಿಜ್ಞಾನಶಾಸ್ತ್ರ ಸಂಶೋಧನೆಗಳಲ್ಲೇ ಅವರು ಇರುಳೆಲ್ಲ ಮುಳುಗಿ ಮೇಲೇರಲರಿಯದೆ ಕೈಕಾಲು ಬಡಿದರು. ಅವರ ಆಗಿನ ಸಂಶೋಧನೆಗಳಿಗೆ ಒಂದು ಉದಾಹರಣೆಯನ್ನು ಕೊಡುವುದು ಸೂಕ್ತ. ಹೆಚ್ಚು ಕೊಡಬೇಕಾದ ಅವಶ್ಯಕತೆ ಇಲ್ಲ ...ನೆಯ್ಗೆ ಮೀಷೀನು ಗಳಿಂದ ಉದ್ದಕ್ಕೂ ಥಾನ್ ಥಾನ್ ಎಂದು ಈಗ ಹೊರಬರುತ್ತಿರುವ ಬಟ್ಟೆಗೆ ಬದ ಲಾಗಿ, ಲಂಗ ಲುಂಗಿ ಅಂಗಿ ಜುಬ್ಬ ಕುಪ್ಪಸ ಕೋಟು ಷರಾಯಿ ಷರ್ವಾನಿ ಇತ್ಯಾದಿ ಗಳೇ ಏಕೆ ಬರಬಾರದು, ಎಂದು ಡಾ|| ರು ಯೋಚಿಸಿದರು. ಒಂದುಭಾರಿ ಗುಂಡಿ ಯನ್ನು ಕಿರು ಬೆರಳಿಂದ ಅಮುಕಿದ ಕೂಡಲೇ ಚಕ್ರಗಳು ತಿರುಗಿ ಸುತ್ತಿಗೆಗಳು ಬಡಿದು ಬೆಲ್ಟುಗಳು ಬಿಗಿದು ನೂಲೆಲ್ಲ ಸೇರಿ ಬಟ್ಟೆಯಾಗಿ ಕತ್ತರಿ ಕೆಲಸ ನಡೆದು, ಆಯಾ ವ್ಯಕ್ತಿಯ ಆಳತೆ ಅವಶ್ಯಕತೆ ಆಚಾರ ಇವುಗಳಿಗನುಗುಣವಾಗಿ ತರ ತರದ ಉಡಿಗೆಗಳು ತಯಾರಾಗುವಂತೆ ಯಂತ್ರ ಸಮೂಹವನ್ನು ಜೋಡಿಸಲು ಅವರು ಹಗಲೆಲ್ಲ ಎಚ್ಚರವಾಗಿದ್ದು ಹವಣಿಸಿದರು. ಅಂಥ ಒಂದು ಯಂತ್ರ ಸಿದ್ಧವಾದರೆ, ಟೈಲರಂಗಡಿಯಲ್ಲಿ ದಪ್ಪ ಹೊಟ್ಟೆಯುವರಿಗಾಗುವ ಅವಮಾನ ಪ್ರಸಂಗಗಳು ವಜಾ ! ಟೈಲರುಗಳಿಗೂ ಸರಾಗ ! ಗಿರಾಕಿಯ ಬಾಗಿಲು ಕಾದು ಅವರನ್ನ ನಡುದಾರಿಯಲ್ಲಿ ಅಡ್ಡಕಟ್ಟಿ ಬಾಕಿ ವಸೂಲಿಗೆ ಪ್ರಯತ್ನಿಸಬೇಕಾಗಿಲ್ಲ ...ಆದರೆ, ಡಾ|| ರ ಈ ಸಂಭೋ ಧನೆಯ ಮರ್ಮವನ್ನು ಪತ್ತೆ ಹಚ್ಚಿದ ಅವರ ವಿಶ್ವ ವಿದ್ಯಾನಿಲಯದ ಅಧಿಕಾರಿಗಳು, " ನೀವು ತಕ್ಷಣವೇ ಸ್ವದೇಶಕ್ಕೆ ಹಿಂತಿರುಗುವುದು ಮೇಲು ; ಇಲ್ಲಿರುವುದು ಕೀಳು!" ಎಂದರು ಬಹಳವಾಗಿ ಪ್ರಯಾಸಪಟ್ಟು ಅವರು ಡಾ|| ರಿಗೆ ಒಂದು ನೌಕಾಸನವನ್ನೊ ದಗಿಸಿ, ರವಾನಿಸಿದರು.

ಒಂದುತಿಂಗಳ ಕಾಲ ಡಾ || ಡಾಮೋದರಂರವರು ನೀರಿನ ಮೇಲಿಂದ ಬಂದರು. ಆಗ ಅವರ ತಲೆಯನ್ನು ತಿನ್ನುತ್ತಿದ್ದದ್ದು, ರೋಮನಾಶಕ ಕ್ರಿಮಿಕೀಟಗ ಳಲ್ಲ—ಯಂತ್ರ ಸೃಷ್ಟಿಯ ಚಿಂತೆಗಳು! ಅಟ್ಲಾಂಟಿಕ್ ಸಾಗರ, ಭೂ'ಮಧ್ಯ' ಸಾಗರ, ಕೆಂಪು ಸಾಗರ, ಹಿಂದೂ ಸಾಗರ, ಮುಂದೂ ಸಾಗರ, ಎಂದೆಲ್ಲ ಸಾಗರಗಳಿಗೆ ನಾಮ ಕರಣ ಮಾಡಿದ ಭೂಪತಿಗಳು ನೀರಿನ ಮೇಲೆ ಅವುಗಳನ್ನು ಬರೆದಿಡಬೇಡವೆ? ಒಂದು ಕಡೆಯೂ ಬರಸೇ ಇಲ್ಲ. ಇದು ಶುದ್ಧ ಮೋಸ- ಎಂದು ಡಾ|| ರಿಗೆ ಅನ್ನಿ ಸಿದ್ದರಲ್ಲಿ ಆಶ್ಚರ್ಯವೇನು ? " ಕೊಳದ ಮೇಲೆ ಅಕ್ಷರವ ಕೊರೆದಂತೆ, " ಎಂದು ಅಜ್ಞಾನಯುಗದ ಸರ್ವಜ್ಞ ಹೇಳಿರುವಾಗ, ವಿಜ್ಞಾನಯುಗದ ಸರ್ವಜ್ಞನಾದ ತನಗೆ ಅದು ಸಾಧ್ಯವೇ ? ಎಂದು ಡಾ|| ರು ಪ್ರಶ್ನಿಸಿಕೊಂಡರು. ವಾಟರ್ ಕಲರ್ ನಿಂದ ಹೆಸರುಗಳನ್ನು ಬರೆಯುವುದಕ್ಕಾಗುವುದಿಲ್ಲವೆಂದು ಡಾ|| ರಿಗೆ ಬಲು ಬೇಗ ಹೊಳೆಯಿತು. ಅವರು ರಂಗಶಾಯಿ ಫಣಿಶಾಯಿಗಳನ್ನುಪಯೋಗಿಸಿ ನೋಡಿದರು. ತೇಲುವ ತೈಲವನ್ನೂ ಪರೀಕ್ಷಿಸಿದರು. ಒಂದು ದಿನ ಹಡಗಿನ ಪಕ್ಕಕ್ಕೆ ಸರಿದು ಬಾಗಿ

ಬಗ್ಗಿ ಬ್ರಷ್ ಹಿಡಿದು ಕೊಂಬಿನ ದೀರ್ಘವನ್ನು ಸೇರಿಸುತ್ತಿದ್ದಾಗ, ಕಪ್ತಾನ ಬಂದು ಡಾ|| ರನ್ನು ಎಳೆದು ಹಡಗಿನ ವೈದ್ಯನ ಕೊಠಡಿಗೆ ನೂಕಿದರು. ವೈಜ್ಞಾನಿಕ ಸಂಶೋಧನೆಗಳ ಕಷ್ಟ ನಿಷ್ಠುರಗಳನ್ನು ಆ ಅಂಬಿಗನೇನು ಬಲ್ಲ ?

ಬೊಂಬಾಯಿ ಬಂದರಿಗೆ ಹಡಗು ಬಂದು ನಿಲ್ಲುತ್ತಲೂ, ಹಡಗು ಬೊಂಬಾಯನ್ನು ಸಮೀಪಿಸಿತೋ, ಅಥವಾ ಬೊಂಬಾಯಿ ತೆರೆದು ಹಡಗನ್ನು ಕಬಳಿಸಲು ಸರಿದು ಬಂತೋ, ಎಂಬ ಸಂದೇಹ ಡಾ || ರ ಮೆದುಳನ್ನು ಹೊಕ್ಕಿರಿಯಿತು. "ಇಳಿಯಿರಿ ! ಇಳಿಯಿರಿ !" ಎಂಬ ಕೂಗು ಅವರ ಡೋಲಾಯಮಾನವನ್ನು ನಿಲ್ಲಿಸಿತು. ಹಡಗಿನಿಂದ ಇಳಿಯುಲು, ಡಾ|| ರು ಒಂದು ಹೊಸ ಯಾಂತ್ರಿಕ ವಿಧಾನವನ್ನು ಕಂಡು ಹಿಡಿದಿದ್ದರು. ಅದರ ಸಾರ್ಥಕತೆಯನ್ನು ಪರೀಕ್ಷಿಸಲು ಇದೇ ತಕ್ಕ ಸನ್ನಿವೇಶ ಎಂದು ಅವರಿಗೆ ತೋರಿತು.... ಸಸ್ಯದ ಎಲೆಗಳು ಸೂರ್ಯನ ಕಡೆ ತಾವಾಗಿಯೇ ತಿರುಗುತ್ತವೆ ; ಹಾಗೆಯೇ, ಅದರ ಬೇರುಗಳು ತಾವಾಗಿಯೇ ನೆಲವನ್ನರಸುತ್ತವೆ ಹಾಗಂದಮೇಲೆ, ಬೇರುಸಹಿತ ಕಿತ್ತ ಹಲವಾರು ಸಸಿಗಳನ್ನು ಎರಡೂ ಕಡೆ ಕಿಸೆಗಳಲ್ಲಿ ತುಂಬಿಕೊಂಡು, ಹಡಗಿನ ಡೆಕ್ ಮೇಲೆ ಒಬ್ಬ ಮನುಷ್ಯ ನಿಂತನಾದರೆ, ಅಷ್ಟೊಂದು ಬೇರುಗಳು, "ಮಣ್ಣು ! ಮಣ್ಣು ! ನೆಲ ! ನೆಲ !" ಎಂದು ಒದ್ದಾಡುತ್ತ, ನೂರಡಿ ಆಚೆ ನೂರಡಿ ಕೆಳಗೆ ಕಾಣಿಸುವ ನೆಲಕ್ಕೆ ಧಾವಿಸಲು ಪ್ರಕೃತಿ ದತ್ತವಾದ ಎಲ್ಲ ಶಕ್ತಿಯನ್ನೂ ಉಪಯೋಗಿಸುತ್ತವೆ ; ಧಾವಿಸುತ್ತವೆ ಹಾಗೆ ಧುಮುಕುವಾಗ, ಸಂಗಡಲೇ ತಮ್ಮನ್ನು ಹೊತ್ತು ನಿಂತಿರುವ ೧೪೦ ಪೌಂಡು ತೂಕದ ವ್ಯಕ್ತಿಯನ್ನೂ ಎಳೆದುಕೊಂಡು ಬೀಳದೆ ಗತ್ಯಂತರವಿಲ್ಲ. ಇದೇ ಡಾ|| ರ ಹೊಸ ಸಂಶೋಧನೆ.

ಆದರೆ, ಸಸಿಗಳ ಸಂಖ್ಯೆ ಸಾಲದೆ ಹೋದದ್ದರಿಂದಲೋ, ಕಿಸೆಗಳ ಅಗಲ ಆಳ ಕಡಮೆ ಬಿದ್ದದ್ದರಿಂದಲೋ, ಹಡಗಿಂದ ಇಳಿಯುವ ಕಡೆ ನೆಲಕ್ಕೆ ಸಿಮೆಂಟ್ ಕಾಂಕ್ರೀಟ್ ಹಾಕಿದ್ದರಿಂದಲೋ, ಏನೋ, ಸಸಿಗಳು ಡಾ|| ರನ್ನು ಇಳಿಸಲಿಲ್ಲ. ಅವರೇ ಸ್ವಶಕ್ತಿಯನ್ನು ವೆಚ್ಚಮಾಡಿ ಇಳಿಯಬೇಕಾಗಿ ಬಂತು.

ನಮ್ಮ ದೇಶದಲ್ಲಿ ಡಾ|| ರಿಗೆ ವಿಪರೀತ ಮನ್ನಣೆ ದೊರೆಯಿತು. ಅಮೇರಿಕಾದಲ್ಲಿ ಅವರ ವಿದ್ಯಾ ಗುರುಗಳಾಗಿದ್ದ ಒಬ್ಬರು ಮಹಾಶಯರು, "ಇಂಥ ವ್ಯಕ್ತಿ ಇಲ್ಲಿಗೆ ಬಂದದ್ದು ಇದೇ ಮೊದಲು. ಇವರನ್ನು ನೀವು ಜೋಪಾನವಾಗಿ ನೋಡಿಕೊಳ್ಳಬೇಕಾದದ್ದು" ಎಂದು ಸರ್ಟಿಫಿಕೇಟ್‌ನಲ್ಲಿ ಬರೆದಿದ್ದರು. ಅದನ್ನು ಓದಿ ಅನೇಕರು ಡಾ|| ರ ಪ್ರತಿಭೆಗೆ ತಕ್ಕ ನೌಕರಿ ತಮ್ಮಲಿಲ್ಲವಲ್ಲಾ ಎಂದು ವ್ಯಥೆ ಪಟ್ಟರಂತೆ. ಕಡೆಗೆ, ಶ್ರೀಮಂತರೊಬ್ಬರು ತಮ್ಮ ಸ್ವಂತ ಖರ್ಚು ವೆಚ್ಚಾದಿಗಳಿಂದ ಸ್ಥಾಪಿಸಿರುವ ಒಂದು ಹೊಸ ಸಂಶೋಧನಾಲಯದಲ್ಲಿ ಡಾ|| ರಿಗೆ ಸ್ಥಳ ಸಿಕ್ಕಿತು. ಅಂದಿನಿಂದ ಅವರ ಯುಕ್ತಿ ಸಾಮರ್ಥ್ಯಗಳು ದಿನೇ ದಿನೇ ಬೆಳಕಿಗೆ ಬರುತ್ತಿವೆ.

( ಸಶೇಷ ) ಪಾಟೀಲ.



# ತುಂಟ ಗಣಪತಿ.



— ೧ —

ಹಿಂದೆ ಕೈಲಾಸದಲಿ ಮನೆಯಲಿ ಅದು ಇದನು ಕುರಿತಾಡುತ
ತಂದೆ ಪರಶಿವ ತಾಯಿ ಪಾರ್ವತಿ ಇರೆ, ಬಸವ ಮುಖ ಬಾಡುತ
ಬಂದು ತಿಳಿಸಿದನಿಂದುಧರನಿಗೆ: ‘ ತಂದೆ ! ಈ ಮೊರೆ ಲಾಲಿಸು.
ಗಣಪನೆನ್ನನು ಗೋಳ ಹುಯ್ವನು. ಇದನು ತಪ್ಪಿಸು ಪಾಲಿಸು.
“ ಗುಟ್ಟು ಹೇಳುವೆ ಕಿವಿ ಕೊಡೆನುತ ತಲೆಯು ಕಿವಿಕಡೆ ಬಾಗಿಸಿ
ನೀರು ಕೊಡಕೊಡ ಫೂತ್ಕರಿಸುವನು ಕಿವಿಗೆ ಸೊಂಡಿಲು ತಾಗಿಸಿ.
“ ನಗು ನಗುತ ಬೆನ್ನೇರಿ ಬರುವನು ಬಾಲದಲಿ ಕೈಯೂಡಿಸಿ
ಥಟ್ಟನೆಳೆದದ ಕಟ್ಟಿಬಿಡುವನು ಮುಂದೆ ಕೊಂಬಿಗೆ ಜೋಡಿಸಿ.
“ ಬೆನ್ನೆ ಕಂಬಿ, ಬಾಲ ಹಗ್ಗ, ಬಸವನೇ ಬಿಲ್ಲೆಂಬನು.
ಎಳೆದು, ಬಾಲವ ಮಿಡಿದು, ಜೋಡಿಸಿ ನೆಲಕೆ ಬಿಡುವನು ಅಂಬನು.
“ ಬಿಟ್ಟ ಬಾಣಕೆ ಭೂಮಿ ಬಿರಿವುದು, ನೀರು ಛಿಲ್ಲೆನುತುಗುವುದು.
ಕಂಡು ನೀರೊಳು ನೆನೆದ ನನ್ನ, ತರವೆ ಗಣಪತಿ ನಗುವುದು ?
“ ಮಲಗಿದರೆ ಶಿವನಾಣೆ ಎಂಬನು. ನಿಂತರೂ ಶಿವನಾಣೆಯು
ಇಕ್ಕಿ, ನಡೆದರು ಆಣೆಯಿಡುವನು. ಇದಕುಪಾಯವ ಕಾಣೆಯು ?
“ ಹುಲ್ಲು ತಿನುವನೆ- ಬಾಯು ಬಿಡದೊಲು ಗಲ್ಲವನು ಬಿಗಿಹಿಡಿವನು.
ನಿದ್ದೆ ಗೈವನೆ- ಮುಚ್ಚದೊಲು ಎವೆ ಎರಡನೂ ತೆರೆದಿಡುವನು.
“ ಕಾಟ ಒಂದೆರಡಲ್ಲ ಶಂಭೋ ! ನಾಯಿಪಾಡಾಯ್ತೆನ್ನದು !
“ ಬಾಲನನು ಬೆದರಿಸುವೆನೆನ್ನಲೆ- ಹೆಂಗರುಳು ಕೇಳೆನ್ನದು ! ”
ನಗುತ ನಾಗಾಭರಣ ನುಡಿದನು ನೋಡಿ ಗೌರಿಯು ಮೌನವ :
ದೇವಿ ! ಕೇಳಿದೆಯೇನು- ಮಗನ ಅತಿಶಯದ ಗುಣಗಾನವ !
“ ಅದೆಕೊ ಬರುತಿದೆ ಹೆಜ್ಜೆಸಪ್ಪಳು ! ನೆಲವೆ ನಡುಗುವ ಸೂಚನೆ !
ಬಸವ ! ಕೊಡಿಸುವೆ ನಿನಗೆ ಗಣಪನ ಕಾಟದಿಂದ ವಿಮೋಚನೆ ! ”

— ೨ —

ಪುಟ್ಟ ಸೊಂಡಿಲಾಡಿಸುತ್ತ ಬಂದನು ಗಣಪ
ಆನೆಯ ಕಿವಿ ಸವರಿಕೊಳುತ ಹೊಟ್ಟೆಯ ಟೊಣಪ.
“ ನೋಡಮ್ಮಾ ! ಕಿವಿಯೆಳೆದು ಅಣ್ಣ ಕುಮಾರ
ಹೇಗಾಗಿದೆ ! ಕೆಂಪು ! ಉರಿ ! ಮೆಣಸಿನ ಕಾರ ! ”

ಮೊದಲೇ ಬಲು ಸಣ್ಣ ಕಿವಿ ಗಜವದನನಿಗೆ!
ಹಿಡಿದೆಳೆದರೆ, ಕೋಪ ಬರದೆ- ಹೆತ್ತ ಜನನಿಗೆ!
" ಕರೆ ಅವನ! ಎಲ್ಲಿ ಅವ? ಥೆ! ಬಹುದುಷ್ಟ!
ಅವನ ಗುಣವ ತಿದ್ದಲು ಪರಶಿವನಿಗು ಕಷ್ಟ!"
ಎನೆ ಗೌರಿ, ಶಿವ ನಕ್ಕು, " ಅದು ಸರಿ, ಕಂದ!
ನೀನವನಿಗೆ ಏನ್ಮಾಡಿದೆ- ಅದು ಹೇಳೆಂದ"
" ನನ್ನಷ್ಟಕೆ ನಾ ಕುಳಿತು ಮಗ್ಗಿ ಹೇಳುತ
ಎರಡೊಂದಲ ಆರಂಭಿಸೆ, ಅದನು ಕೇಳುತ,
" ಎರಡಾರಲ ಎಂದೊಡನೆ ಥಟ್ಟನೆ ನುಗ್ಗಿ
ಹಿಡಿದೆಳೆದನು; ಎಡದ ಕಿವಿ ಹಿಸಿಯಿತು ಹಿಗ್ಗಿ!"
— ಎನೆ ಗಣಪ, ಗೌರಿ ನಕ್ಕು, " ಛಿಃ! ಬಲುತುಂಟ!
ಅಣ್ಣನ ನೀ ಹೀಗೆಲ್ಲಾ ಅನ್ನುವುದುಂಟ!
" ಒಂದು ಮುಖಕೆ ಕಣ್ಣೆರಡು; ಆರು ಮುಖಕ್ಕೆ
ಎಷ್ಟಾಯಿತೊ ನಿನಗೇತಕೆ? ಯಾವ ಸುಖಕ್ಕೆ?
ಎಂದವನ ಛೀಗುಟ್ಟಿ ಗದರಿಸಿಬಿಡಲು
ಗಣಪ ಬುಸುಗುಡುತ್ತ ಹತ್ತಿ ತಾಯಿಯ ಮಡಿಲು-
ಮೊರೆದನು: " ಹೋ! ಮತ್ತೆ ಅವ ಮೊಳಮೊಳ ಮೀಟಿ
ಮೂಗೆನ್ನದನೆಳೆದೆಳೆದುದು! ಅದು ಇದು ಪೀಟಿ!"
ಎನೆ, ಮಗನ ಮುದ್ದುತನಕೆ ಶಿವ ಮನಸೋತು,
" ಏನೋ ಎಂದಿದ್ದೆನೆ ಈ ತಿಂಡಿಯು ಪೋತು!"
ಎಂದವನ ಬರಸೆಳೆದು ಬಿಗಿಬಿಗಿದಪ್ಪಿ,
ಬಸವನ ಕಡೆ ಕಣ್ ಕರುಣಿಸಿ, " ಈ ಇವ ತಪ್ಪಿ
" ಕಾಡಿದನಲ ಓ ಬಸವ ಭಕ್ತನ ನಿನ್ನ!
ಚಿಂತಿಸದಿರು. ಶಿಕ್ಷಿಸುವೆ ನಾನಿವನನ್ನ!"
ಎನೆ ಬಸವ " ಓ ಪ್ರಭುವೆ! ಪರಮ ದಯಾಳಾ!
ಬೇಡಿಕೊಳುವೆ- ಮರೆತುಬಿಡು ಭಕ್ತನ ಗೋಳ!
" ಮಕ್ಕಳಿಗೀ ತುಂಟತನ ಸಹಜ, ಪುರಾರಿ.
ತಪ್ಪೆನ್ನದು. ಕ್ಷಮಿಸು" ಎಂದು ಬಸವ ಪರಾರಿ!

—ರಾಜರತ್ನಂ.

# ನಂಬಿದವರ ಪಾಡು ★★

(ಗಂಗಾಧರ)

"ನಾನು ನುಡಿದಂತೆ ನಡೆಯುವವ" "ನಾನು ನುಡಿದಂತೆ ನಡೆಯುವವ" "ನಾನು ನುಡಿದಂತೆ ನಡೆಯುವವ"........ಈ ಪದಸರಣಿ ಅಂದಿನ ಭಾಷಣದಲ್ಲಿ ಸುಮಾರು ಅರವತ್ತು ಸಲ ಬಂತು. ಮೊತ್ತಮೊದಲು, ಅದೇ ಮಾತು ! ನಟ್ಟನಡುವಿಗೆ ಅದೇ ಮಾತು ! ಕಟ್ಟಕಡೆಗೂ ಅದೇ ಮಾತು !........ಭಾಷಣ ಕೇಳುತ್ತಿದ್ದ ಭೀಮಯ್ಯ ಬೆರಗಾದ "ಎಲಾ ! ಎಂಥ ಚಿನ್ನದಂತ ಮನುಷ್ಯ, ನುಡಿದಂತೆಯೇ ನಡೆಯುವುದೆಂದರೆ, ಎಂಥ ಹರಿಶ್ಚಂದ್ರನಿಗೂ ತಲೆ ಗಿರ್ರೆನಿಸುತ್ತದೆ; ಈ ಕಲಿಕಾಲದಲ್ಲೂ ಇವಯ್ಯಾ ಇಷ್ಟು ಕಠಿಣ ಕೆಲಸಾನ ನಡೆಸಿಕೊಂಡು ಬರ್‍ತಿದಾನಲ್ಲಾ ! ಈ ಮಾರಾಯನ ಕಾಲು ತೊಳೆದು....ಇತ್ಯಾದಿ, ಬೆರಗಾಗಿ, ಮೂಗಿನ ಮೇಲಿಟ್ಟ ಬೆರಳನ್ನು ತೆಗೆಯುದೆಯೇ, ಮನೆಗೆ ಬಂದ ಇವತ್ತು ನನ್ನ ಜನ್ಮ ಸಾರ್ಥಕವಾಯಿತು; ನುಡಿದಂತೆ ನಡೆಯುವ ಪುಣ್ಯಾತ್ಮನನ್ನ ಎರಡೂ ಕಣ್ಣಾಗಳಿಂದ ಒಮ್ಮೆಲೆ ನೋಡಿ, ಜೇನಿನಂಥ ಅವರ ಮಾತನ್ನು ಕಿವಿಗೆ ಸುರಿದುಕೊಂಡೆನಲ್ಲಾ, ನಾನೇ ಧನ್ಯ ...ಇನ್ನು ನನಗೆ ಕಾಶೀನೂ ಬೇಡ, ಮಾದೇಶ್ವರನ ಬೆಟ್ಟವೂ ಬೇಡ, ಕಣ್ಣು ಮುಚ್ಚಿದ ಕೂಡಲೇ, ಸ್ವತಂತ್ರ ಸ್ವರ್ಗಕ್ಕೇ ಟಿಕೇಟು, ಅಂತ, ಹೊಸಲು ದಾಟಿ, ಒಳನುಗ್ಗಿದ. "ನುಡಿದಂತೆ ನಡೆಯುವವರನ್ನು ಕಣ್ಣಾತುಂಬು ನೋಡಿದೆ ಕಣೆ ! ಕಿವಿ ತುಂಬ ಕೇಳಿದೆ ಕಣೆ ! ಎಂದು ಕುಣಿದ. ಅವನ ಮಡದಿಗೆ ಗಾಬರಿಯಾಯಿತು ಭೀಮಯ್ಯನಿಗೆ ಹೆಂಡದ ಅಭ್ಯಾಸವಿಲ್ಲ; ಅಫೀಮು ಗಾಂಜಾ ರಾಮರಸ, ಅರ್ಕ-ಬೋಜ, ವಿಸ್ಕಿ ಇತ್ಯಾದಿ ಅವನ ತುಟಿ ಸೋಕಿಲ್ಲ. ಅವನ ವಂಶವೃಕ್ಷದಲ್ಲಿ ನೇತಾಡುವ ಹಿರಿಯರು ಯಾರಾದರೂ ಇಂಗು ತಿಂದಿದ್ದರೋ, ಏನೋ ? ಯಾರೂ ಕಾಣದ, ಎಲ್ಲೂ ಕೇಳದ, ನುಡಿದಂತೆ ನಡೆವ ಗಗನ ಗೋಪುರವನ್ನು ಭೀಮಯ್ಯ ನಮ್ಮ ದೇಶದಲ್ಲಿ ಈಗ, ಗಾಂಧಿಜಿಯು ಮರಣಾನಂತರ, ಕಾಣುವುದೆಂದರೇನು ? ಕೇಳುವುದೆಂದರೇನು ? ಅವಳಿಗೆ ಗಾಬರಿಯಾಯಿತು. ತಂದೆಗೆ ತಂತಿ ಕೊಟ್ಟಳು; ಅಣ್ಣನಿಗೆ ಆಳು ಕಳುಹಿಸಿದಳು; ಬಾತ್ಮಿಯನ್ನು ಬರಹೇಳಿದಳು; ನೆರೆಮನೆಯವರಿಗೆ ಸಮಾಚಾರ ತಿಳಿಸಿದಳು; ಆಸ್ಪತ್ರೆಯಲ್ಲಿ ಜಾಗಖಾಲಿ ಇದೆಯೇ ಎಂದು ವಿಚಾರಿಸಿದಳು. ಖರ್ಚಿಗಾಗಿ ಕತ್ತಲ್ಲಿದ್ದ ಮೂರೆಳೆಸರವನ್ನು ಅಡವಿಟ್ಟಳು, ತಿರುಪತಿಗೆ ಹರಕೆ ಹೊತ್ತಳು. ದಾರಿಉದ್ದಕ್ಕೂ ಭೀಮಯ್ಯ, "ಇಲ್ಲಿ ! ಇದಾನ್ರಿ ! ನುಡಿದಂತೆ ನಡೆಯುವವ ಇದಾನ್ರಿ ! ನಾನು ಕೇಳಿದೆ, ಆತ ಹೇಳಿದ್ದನ್ನ ! ಎಂದು ಕೈ ಮುಗಿಯುತ್ತಲೇ ಇದ್ದ....ಕಡೆಗೆ, ಆ ಗಂಡು ನರ್ಸಿಗೆ ಕೋಪ ಬಂತು, ನೂರು ಜನ ನೂರು ತರಹ ಬೊಗಳುತ್ತಾರೆ, ಅದನ್ನೆಲ್ಲ ನಂಬಿದೋನು ನೀನೆಂಥ ಹುಚ್ಚ ! ಬಾ ! ಎಲ್ಲಕ್ಕೂ ನಮ್ಮ ಹತ್ರ ಔಷಧಿ ಇದೆ'' ಎಂದು ನೂಗಿಸಿಯೇ ಬಿಟ್ಟ ಒಳಕ್ಕೆ—

# ಕಂಡಿರೇನಯ್ಯಾ !

―― ೦ ――

ಅಯ್ಯಾ ! ನಿಮ್ಮ ಬೀದಿಯಲಿ
ನಮ್ಮ ಚೆಲುವ ಜಾನಿಯ ಕಂಡಿರೇನಯ್ಯಾ ?
ಕೊರಳಲಿ ಪಟ್ಟಿ, ಹಣೆಯಲಿ.
ಕೆಂಪು ಪಟ್ಟೆಯ ನಾಮ ಒಂದಿಹುದು, ಕಂಡಿರೇನಯ್ಯಾ !

ಎಮ್ಮ ಮನೆಯಂಗಳದ
ಮೂಲೆಯಲಿ ಹುಟ್ಟಿತಯ್ಯಾ
ಇದರವ್ವ ನೀಲಗಿರಿಯದಯ್ಯಾ !
ಒಳ್ಳೇ ಜಾತಿ ಮರಿಯಯ್ಯಾ !

ಬೆಳಗಿಂದ ಮನೆಯ ಸೇರಿಲ್ಲ.
ಅನ್ನವನು ಮೆದ್ದಿಲ್ಲ
ಬ್ರೆಡ್ಡನೂ ತಿಂದಿಲ್ಲ
ಇದ್ದ ತಂಗೂಳೆಲ್ಲಾ ಅಲ್ಲಿಯೇ ಇರುವುದಯ್ಯಾ !

ಸೋಪ್ಹಾಕಿ ಮೈತೊಳೆದು ಸೋಫಾದ ಮೇಲಿರಿಸಿ
ಲಲ್ಲೆಯಾಡುತಲಿದ್ದೆನಯ್ಯಾ !
ಮನೆಯವರ ಕಂಡಾಗ ಬಾಯ್ಬಿಟ್ಟು ಬೊಗಳುತ್ತ
ಕಳ್ಳರೂ ಬಂದಾಗ ಬಾಲ ಮುದುರುತ್ತಿತ್ತಯ್ಯಾ !

ಇನ್ನೂ ಒಂದು ವರುಷದ
ಚೊಚ್ಚಿಲ ಕುನ್ನಿ ಕಾಣಯ್ಯಾ !
ಮೊಟಕು ಬಾಲದ ಜಾನಿಯ ಕಂಡಿರೇನಯ್ಯಾ !
ಅಯ್ಯಾ !

— ಜಿ. ಪಿ. ಶು.

# ಬಾಪೂಜೀಯ ಭಾರತ ನಾಟ್ಯ

— ೦ —

ಬಾಪೂಜಿಯವರ ಬಲಗೈನಂತಿದ್ದ ಶ್ರೀ ರಾಜೇಂದ್ರ ಬಾಬುಗಳು. ' ಗಾಂಧಿ ಸ್ಮಾರಕ ' ನಿಧಿಗಾಗಿ ದೇಶಾದ್ಯಂತ ಪ್ರವಾಸಗೊಂಡಿರುವರಂತೆ. ಹೆಮ್ಮೂರಿಗೆ ಬರುತ್ತಾರಂತೆ.

ಹೆಮ್ಮೂರಿನಲ್ಲಿ ಚಟುವಟಿಕೆಯೋ ಚಟುವಟಿಕೆ.

* * *

ಲೋ! ಶ್ರೀಕಂಠ ! ಬಾಬೂ ರಾಜೇಂದ್ರಪ್ರಸಾದ್ ಬರುತ್ತಾರಂತಲ್ಲೋ. ಖಾದಿ ಜುಬ್ಬ ಹೊಲಿಸಿಕೊಂಡೆಯೋನೋ ?

ಅವತ್ತೇ ' ಆರ್ಡರ್ ' ಕೊಟ್ಟು ಬಿಟ್ಟೇಮ್ಮಾ, ಗಜಕ್ಕೆ ಆರು ರೂಪಾಯಿ. ಇಂಥಾ ಮಿಲ್ ಖದ್ದರ್ ಎಲ್ಲೂ ಸಿಗುಲ್ಲ ಅಂತ ಹೇಳಿದ ಅಂಗಡಿಯುವ. ಎರಡು ಜುಬ್ಬಾಕ್ಕೆ ಆರ್ಡರ್ ಕೊಟ್ಟಿದ್ದೇನೆ. ಮೂವ ಏನಂತಾನೋ ?

* * *

**ಅಗಸಗಿತ್ತಿ:—** ಏನೂ ಅಂದರೆ ದಿನಾಲೂ ಈ ಅವೇಳೇಲಿ ಮನೆಗೆ ಬರುತ್ತೀರಿ. ಬೆಳಗಾದರೆ ಪಠಾಣನ ದರ್ಶನ. ಹೀಗೆ ನೀವು ಆಡಿದರೆ ನಾವು ಸಾಲ ತೀರಿಸೋದು ಹೇಗೆ, ಅಂದರೆ ?

**ಅಗಸ:—** ಬಿಡೆ, ಬಾಬು ರಾಜೇಂದ್ರಪ್ರಸಾದರು ಬರುತ್ತಾರಂತೆ. ಊರಿನವರೆಲ್ಲಾ, ಖಾದಿ ಬಟ್ಟೇನ ' ಅರ್ಜೆಂಟ್ ವಾಷ್ ' ಅಂತ ಬಂದೇ ಬರುತ್ತಾರೆ. ಎರಡೇ ದಿನದಲ್ಲಿ ಎಲ್ಲಾ ಒಗೆದು ಹಾಕ್ತೇನೆ. ನೀನು ಮಾತ್ರ ಇಸ್ತ್ರಿ ಪೆಟ್ಟಿಗ್ಗೆ ಬೆಂಕಿ ಹಾಕಿರು, ಸಾಲ ಎಲ್ಲಾ ತೀರಿಸಿ ಬಿಡೋಣ.

* * *

ಸಾಹುಕಾರ ' ಮಲ್ಲಯ್ಯ: ' ಏನು ರಂಗಯ್ಯ ! ಈ ಸಾರಿ ಶಖೆ ಜಾಸ್ತಿಯಲ್ಲವೇ? ಉದಕಮಂಡಲಕ್ಕೆ ಒಂದು ಹದಿನೈದು ದಿನ ಹೋಗೋಣ ಅಂತ ಏರ್ಪಾಡು ಮಾಡಿದ್ದೀನಿ, ನೀನು ಬರ್ತಿಯೂ ?

ಸಾಹುಕಾರ ರಂಗಯ್ಯ ; 'ಹೌದು ನಾನೂ ಹೋಗೋಣ ಅಂತಲೇ ಇದ್ದೆ. ಶಖೆ ಜಾಸ್ತಿ. ಅಲ್ಲದೆ ಅಂದಹಾಗೇ ಬಾಬು ರಾಜೇಂದ್ರಪ್ರಸಾದರು ನಮ್ಮೂರಿಗೆ

ಬರ್ತಾರಂತಲ್ಲಾ! ಅವರ ಸನ್ಮಾನ ಕೂಟಕ್ಕೆ ಅಂತ ಒಂದು ಕರಿಯೋಲೆ ಕಾಂಗ್ರೆಸ್ ಕಛೇರಿಯಿಂದ ಬಂದಿದೆ. ಈ ಕಷ್ಟ ತಡೆಯಲಾರೆ. ನಾನೂ ಬರ್ತೀನಪ್ಪಾ. ಒಂದು ಹದಿನೈದು ದಿವಸ. ತಣ್ಣಗಾದಮೇಲೆ ತಿರುಗಿ ಬರೋಣ" ಹೆಮ್ಮ್ಯಾರಿಗೆ—

* * *

ದರ್ಜಿ: "ಈ ಗಾಂಧಿ ಟೋಪಿ ಹೊಲಿ ಹೊಲಿದೂ ಕೈ ಬಿದ್ದು ಹೋಯ್ತಪ್ಪಾ. ದಿನಕ್ಕೆ ಇಪ್ಪತ್ತುನಾಲ್ಕು ಗಂಟೆ ಇದನ್ನೇ ಹೊಲಿದರೂ, ಈ ಅಂಗಡಿಯವರ 'ಆರ್ಡರ್' ನಿಭಾಯಿಸಕ್ಕೆ ಆಗುಲ್ಲ.

* * *

ಶಾಲಾ ಮಾಸ್ತರು ತಮ್ಮ ಹೆಂಡತೀಗೆ—

ನೋಡೇ! ಬಾಬೂ ರಾಜೇಂದ್ರ ಪ್ರಸಾದರು ಬರುತ್ತಾರಂತೆ. ಗಾಂಧಿ ನಿಧಿ ಸಂಗ್ರಹಿಸಲು ಬರುತ್ತಾರಂತೆ. ಹತ್ತು ದಿನದ ಸಂಪಾದನೆ ಕೊಡಬೇಕು, ಎಂದು ಸೂಚಿಸಿದ್ದಾರೆ. ಅಂದರೆ ನನಗೆ ಸಂಬಳ ಮೂವತ್ತು ರೂಪಾಯಿ. ಈ ತಿಂಗಳು ಆ ಮಹಾತ್ಮನ ನೆನಪಿಗೆ ಹತ್ತು ರೂಪಾಯಿ ಮೀಸಲು, ಅಂದರೆ ಈ ತಿಂಗಳು ಇಪ್ಪತ್ತೇ ರೂಪಾಯಿ ಸಂಬಳ. ಆದರಲ್ಲಿ ಸ್ಟಾಂಪಿನ ಖರ್ಚಿಗಾಗಿ ಒಂದಾಣೆ ಹಿಡಿದುಕೊಕೊಳ್ಳುತ್ತಾರೆ. ಅಂದರೆ ಹತ್ತೊಂಭತ್ತು ರೂಪಾಯಿ ಹದಿನೈದಾಣೆ ನಿನ್ನ ಕೈಲಿ ಹಾಕುತ್ತೇನೆ. ಸಂಸಾರ ನಿಭಾಯಿಸಬೇಕು ಏನುಮಾಡ್ತಿ? ಹೇಗೆ ಮಾಡ್ತಿ?

ಆಕೆ- 'ಉಪವಾಸವೋ ವನವಾಸವೋ ಮಾಡೋಣ ಅಂದರೆ, ಮನೇಲಿ ನಾಲ್ಕು ಸೇರು ಕಡಲೇಕಾಯಿ ಬೀಜ ಇದೆ. ರಾತ್ರಿ ಊಟಕ್ಕೆ ಆಯಿತು, ಒಂದು ಸೇರು ಹುಣಸೇ ಬೀಜ ಇದೆ. ಕಾಫಿಗಾಯ್ತು. ಪರಂಗೀ ಗಿಡದಲ್ಲಿ ಕಾಯಿ ಬಿಟ್ಟಿದೆ. ತರಕಾರಿಗಾಯ್ತು. ಕೆಂಚಕ್ಕನ ಮನೆಯಲ್ಲಿ ಮೆಣಸಿನ ಪುಡಿ ಮಾಡುಕ್ಕೆ ಬರಹೇಳಿದ್ದಾಳೆ. ಸ್ನೇಹಿತರ ಮನೆಯಲ್ಲಿ ಕೂಲಿ ಕೇಳುಕ್ಕೆ ಆಗುತ್ತಯೇ?- ಒಂದು ಸೇರು ಮೆಣಸಿನ ಪುಡಿ ಕೊಟ್ಟಾಳು. ಅದನ್ನೇ ತೆಗೆದುಕೊಂಡು ಬರ್ತೀನಿ. ಆದರೆ ನೋಡಿ ಅಂದ್ರೆ ಅವರ ಸಾರ್ವಜನಿಕ ಭಾಷಣಕ್ಕೆ ನನ್ನನ್ನೂ ಕರೆದುಕೊಂಡು ಹೋಗ್ಬೇಕು'

ಆತ 'ಅಲ್ಲವೇ? ಮರುಳೀ! ಅವರು ಹಿಂದಿಯಲ್ಲಿ ಮಾತನಾಡುತ್ತಾರೆಕಣೇ? ನಿನಗೇನು ಗೊತ್ತಾಗುತ್ತೆ?- ಹೋಗಲಿ ಕರಗಕ್ಕೆ ಕರೆದುಕೊಂಡುಹೋಗ್ತೀನಿ, ಏನೇ?

ಆಕೆ "ಅಬ್ ಆಪ್ ಅಚ್ಛಾ ಬಾತ್ ಕೀಯೇ! ಮೈಭೀ ಸುನಾಯಿಂಗಾ ಬಾಬುಜೀಕಾ ಭಾಷಣ್!"

* * *

ಆತ ಅವಕ್ಕಾಗಿ, 'ಯಾವಾಗಿಂದಲೇ ಈ ಹಿಂದಿ'

ಆಕೆ. ಹಿಂದಿಯಲ್ಲಿ ನಾನು ರಾಷ್ಟ್ರಭಾಷಾ ವಿಶಾರದೆ ಅಂದ್ರೇ! ನೀವು ಗಣಿತದಲ್ಲಿ 'ಆನರ್ಸ್' ನಲ್ಲಿ ಫಸ್ಟ್ ಅಂತಿದ್ದರಲ್ಲಾ ಹಾಗೇ ನಾನೂ ಹಿಂದೀ ರಾಷ್ಟ್ರಭಾಷಾ ವಿಶಾರದೆ. ಪರೀಕ್ಷೆಯಲ್ಲಿ ಫಸ್ಟ್ ಅಂದರೇ!

* * *

ಆಡಳಿತ ಅಧಿಕಾರಿಗಳ ಸೂಚನೆಯ ಮೇಲೆ ನಮ್ಮೂರಿನಿಂದ ಗಾಂಧಿ ಸ್ಮಾರಕ ನಿಧಿಗೆ, ಹತ್ತು ಲಕ್ಷ ರೂಪಾಯಿಗಳು ಸಂದಿಸಲ್ಪಟ್ಟವು, ವರಮಾನ ಇಲಾಖಾಧಿಕಾರಿಗಳಿಂದ ಐದು ಲಕ್ಷ- ಹತೋಟಿ ಪವಿ.ಗಟ್ಟಿಗಳಿಂದ ನಾಲ್ಕು ಲಕ್ಷ ತೊಂಬತ್ತು ಸಾವಿರದ ತೊಂಬೈನೂರ ತೊಂಭತ್ತು- ಶಾಲಾ ಮಾಸ್ತರಿಂದ ಹತ್ತು ರೂಪಾಯಿ.

* * *

ಅಮರಲೋಕದಲ್ಲಿ ಬಾಪುಜೀ, ಹತ್ತು ರೂಪಾಯಿ ಸಂದಿದ ರಸೀತಿಯನ್ನು ಹಿಡಿದುಕೊಂಡು ಭಾರತ ನಾಟ್ಯವಾಡಿದರಂತೆ.

ಶಿವಣ್ಣ




ಕತ್ತೆ ಕುದುರೆ ಹಾಗೆ ದುಡಿಯೋದೇ ಉಂಟಂತೆ !
ಮೇಷ್ಟ್ರ ಕೋಟಿನ ಕತ್ತುಪಟ್ಟಿ ಯಾಕ್ಹೀಗಿರಬಾರದು ?

# ಅಮ್ಮಾವ್ರ ಅಡಿಗೆ

—— o ——

"ಲೋ ! ನಾರಾಯಣ ! ರಜಾ ಬೇಕು ಅಂತಿದ್ದೆಯಲ್ಲೊ ! ನಾಳೆ ಸೋಮವಾರದಿಂದ ನಾಲ್ಕು ದಿವಸ ರಜ ತೆಗೆದುಕೋ ! ಮುಂದಿನ ತಿಂಗಳ ಸಂಬಳದಲ್ಲಿ ಬೇಕಾದರೆ ಮುಂಗಡ ಹತ್ತು ರೂಪಾಯಿ ತೆಗೆದುಕೋ !

"ಇದೇನೂ ಅಂದ್ರೆ ? ಅವನು ಕೇಳದೇನೇ ರಜಾ ಕೊಡೋದು. ಅಷ್ಟೇ ಅಲ್ಲದೆ ಮುಂಗಡ ಹಣ ಕೊಡೋದು ಬೇರೆ ? ಅಲ್ಲದೆ ಮದ್ರಾಸಿಂದ ನಿಮ್ಮ ಸ್ನೇಹಿತರು ಬೇರೆ ಬರ್ತಾರೆ ? ಒಂದು ನಾಲ್ಕು ದಿನ ಇರ್ತಾರೆ ಅಂದ್ರಿ. ಅವರು ನಾಲ್ಕು ಜನ ಬಂದಿಳಿದರೆ ಅಡಿಗೆಯವನು ಇಲ್ಲದೆ ಹೇಗೆ ?

"ಅದಕ್ಕೇ ಕಣೆ ! ನಾರಾಯಣನಿಗೆ ರಜಾ ತೆಗೆದುಕೊ ಅಂದಿದ್ದು. ಮದ್ರಾಸಿನಿಂದ ಬರ್ತಾರೆ. ನಾಲ್ಕು ದಿನ ಅಂತ ನಾಲ್ಕು ಜನ ಇಳೀತಾರೆ. ಇಲ್ಲಿ ಹವಾ ತಂಪು. ನಾರಾಯಣನ ಕೈ ಕುದುರಿದೆ ಈಗ. ಈಗೊಂದು ಹದಿನೈದು ದಿನದಿಂದ ನೋಡು ಒಳ್ಳೆ ನಳಪಾಕ ಇಳಿಸ್ತಾ ಇದ್ದಾನೆ ಬಂದವರಿಗೆ ಇನ್ನೂ ನಾಲ್ಕು ವಾರ ಕೋರ್ಟಿನ ರಜಾ ಇದೆ. ಇದನ್ನೆಲ್ಲಾ ನೋಡೇ ಅವನಿಗೆ ರಜಾ ಕೊಟ್ಟಿದ್ದು."

"ಅಂದರೆ ನಾನೇ ಅಡಿಗೆ ಮಾಡಬೇಕು ಅಂತೀರಾ. ಎರಡು ವರ್ಷದ ಕೈಮಗು ಬೇರೆ ಇದೆ. ಅದನ್ನು ಕಟ್ಟಿಕೊಂಡು ಹೇಗೆ ಅಂದ್ರೆ !

"ಅಯ್ಯೋ ! ಅದಕ್ಕೇನು ಯೋಚನೇನೆ, ನಾನು ಊಟದ ಏರ್ಪಾಡು ಕ್ಲಬ್ಬಿನಲ್ಲಿ ಮಾಡಿಕೊಂಡಿದ್ದೇನೆ. ನೀನು ಏನಾದರೂ ಬೇಯಿಸಿಡು. ಅಮ್ಮಾವ್ರ ಅಡಿಗೆ ಅಂದರೆ ಬಂದವರು ಏನೂ ಮಾತಾಡೋಹಾಗಿಲ್ಲ. ಬೇಗ ಹಿಂದಿರುಗಿದರೂ ಹಿಂತಿರುಗಿದರೇ !"

"ಚೆನ್ನಾಯ್ತು ಅಂದರೆ !"

—— o ——

# The Challenge Picture of the Year

Now running to crowded houses

FROM 15-4-49 AT

**PRABHAT TALKIES**

Bangalore City—Daily 3 Shows.

Ratan Pictures Musical Romance

**KAJAL**

With-SURAIYA-WASTI



This is the Story of an unscrupulous young man brought up and reared in the best possible atmosphere Son of a wealthy Judge who fell to the meanest depths of humanity because of one evil

**It's a "BANSUM" Release.**




# ಮಗುವಿಗೆ ಆರೋಗ್ಯ ಕೊಡುವ ಈ ಸಾಬೂನೇ ಬೇಕು ?

**ಮೈಸೂರು ಸ್ಯಾಂಡಲ್**

ಸಾಬೂನಿನಿಂದ ಬರುವ ಹೇರಳವಾದ ನೊರೆಯು ಚರ್ಮವನ್ನು ಬಹು ಬೇಗ ಚೊಕ್ಕಟಪಡಿಸುತ್ತದೆ........................ ರಂಧ್ರಗಳಲ್ಲಿ ಕೊಳೆ ಇಲ್ಲದಂತೆ ಮಾಡುತ್ತೆ. ಚರ್ಮಕ್ಕೆ ಆಹಾರದಂತಿರುವ ಈ ಆರೋಗ್ಯಕರವಾದ ಸಾಬೂನನ್ನೇ ಯಾವಾಗಲೂ ಉಪಯೋಗಿಸಿ.

ಎಲ್ಲೆಲ್ಲಿಯೂ ದೊರೆಯುತ್ತದೆ.

## ಮೈಸೂರು ಸ್ಯಾಂಡಲ್ ಸೋಪ್

ಷಾಲಿಮಾರ್ ಸಾಮಗ್ರಿಗಳನ್ನು ಬೇಕೆಂದು ಕೋರುವಾಗ ಅವು ಯಾವ ಕೆಲಸಕ್ಕೆಂಬುದನ್ನು ನಿಷ್ಕರ್ಷೆಯಾಗಿ ಬರೆಯಿರಿ.

# ರಮ್ಯವಾದ

ಆಧುನಿಕ

ಗೋಡೆಗೆ ಹಚ್ಚುವ ಮೆರುಗು



ಷಾಲಿಮಾರ್ ಮಟ್ ಕೋಟ್ ಬಾಳಿಕೆ ಬರುವ, ಬೇಕಾದಾಗ ತೊಳೆಯಬಹುದಾದ, ನಾಯಿಕೊಡೆ ಮೊದಲಾದುವು ಬೆಳೆಯದಂತೆ ಮಾಡಿ, ಗೋಡೆಗಳು ಏರತಗ್ಗುಗಳಿಲ್ಲದೆ ಒಂದೇ ಸಮನಾಗಿರುವಂತೆ ಮಾಡುವ ಎಣ್ಣೆ ಮೆರುಗು

ಪ್ಲಾಸ್ಟರು, ಕಾಂಕ್ರೀಟ್ಟು, ಸಿಮೆಂಟು, ಮರ ಮೊದಲಾದವುಗಳ ಮೇಲೆ ಹಚ್ಚಲು ಉಪಯೋಗಿಸುವುದು......

ಷಾಲಿಮಾರ್ ಮಟ್ ಕೋಟ್ 24 ಅಂದವಾದ ಬೆಣ್ಣೆಯಂತಹ ಬಣ್ಣದ ಛಾಯೆಗಳಲ್ಲಿ ಮಾರಲ್ಪಡುವುದು.

# ಸ್ಪಷ್ಟವಾಗಿ ಹೇಳಿರಿ ಷಾಲಿಮಾರ್ ಮಟ್ ಕೋಟ್

SPK54KN

ಗೋಡೆಗಳನ್ನು ಸಮನಾಗಿ ಮಾಡುವ ಬಣ್ಣ.

**SHALIMAR PAINT, COLOUR & VARNISH CO., LTD.**

**Post Box 136, Madras 1**

Printed by B. S. Iyengar, Bangalore City.

Publisher—B. N. Gupta Editor—M. Shivaram